ಕನ್ನಡ ಕಾವ್ಯಮಾಲೆ—೫೮

# ಷೋಡಶಿ

ಕುವೆಂಪು



ಪ್ರಕಾಶಕರು

ಕಾವ್ಯಾಲಯ

ಮೈಸೂರು

ಮೊದಲನೆಯ ಮುದ್ರಣ : ೧೯೪೭

ಕಾವ್ಯಾಲಯದಿಂದ ಪ್ರತಿ ತಿಂಗಳೂ ಹೊಸ ಪುಸ್ತಕಗಳು ಹೊರಬೀಳುತ್ತವೆ.
ಅವನ್ನು ತಿಳಿಯಲು ನಿಮಗೆ ಇಷ್ಟವಿದ್ದರೆ ನಿಮ್ಮ ವಿಳಾಸವನ್ನು ನಮಗೆ
ತಿಳಿಸಿ. ಹೊಸ ಪ್ರಕಟನೆಗಳಾದಂತೆಲ್ಲ ಸಂತೋಷದಿಂದ
ಸುದ್ದಿಯೋಲೆ ಕಳಿಸುತ್ತೇವೆ.



ಬೆಲೆ :

ಸಾದಾ ಪ್ರತಿಗೆ ರೂ. ೧-೮-೦ ಕ್ಯಾಲಿಕೊ ಪ್ರತಿಗೆ ರೂ. ೨-೧೨

ಮುದ್ರಣಕಾರರು
ಜಿ. ಎಚ್. ರಾಮರಾವ್, ಬಿ.ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್
ಮೈಸೂರು

# ಅರಿಕೆ

ಈ ಸಂಕಲನದಲ್ಲಿ ನಲವತ್ತೈದು ಗೀತಗಳನ್ನು ಅಳವಡಿಸಲಾಗಿದೆ. ಇವುಗಳಲ್ಲಿ ಬಹುಪಾಲು 'ಕೊಳಲಿ' ನಿಂದ ಬಂದವು; ಕೆಲವು 'ನವಿಲಿ' ನಿಂದ; ಉಳಿದವು ಹೊಸತು.

'ಕೊಳಲು' ಪ್ರಕಟವಾದಂದಿನಿಂದಲೂ ಅದು ಜನರ ಮನಸ್ಸನ್ನು ಸೂರೆಗೊಂಡಿದೆ. ಆದರೂ ಓದುಗರಿಗೆ ಅಲ್ಲಿನ ಕವನಗಳ ಆಯ್ಕುವಿಕೆ ಜೋಡಣೆಗಳಲ್ಲಿ ಒಂದು ರೀತಿಯ ಅತೃಪ್ತಿ: ಜೋಡಣೆಯಲ್ಲಿ ಕಲಾತ್ಮಕವಾದ ಕ್ರಮವಿಲ್ಲದೆ ಕವನಗಳನ್ನು ಇಡಿಕಿದಂತಿತ್ತು. 'ಷೋಡಶಿ' ಯ ನಿರ್ಮಾಣದಿಂದ ಆ ನ್ಯೂನತೆ ಬಹುಮಟ್ಟಿಗೆ ಮಾಯವಾಗಿ, ಶೃಂಗಾರ ಪ್ರಧಾನವಾದ ಈ ಸಂಗ್ರಹ ಒಂದು 'ಮಧು ಕುಂಜ ಮಂಜರಿ' ಯಾಗಿ, 'ಕರುವಿಟ್ಟ ಲಾವಣ್ಯ ಲಕ್ಷ್ಮಿ' ಯಾಗಿ ಪರಿಣಮಿಸಿದೆಯೆಂದು ಭಾವಿಸುತ್ತೇವೆ. ಇಲ್ಲಿ ಜೊತೆಯಾಗಿರುವ ಗೀತಗಳು 'ಕೊಳಲು' 'ನವಿಲು' ಗಳ ಪುನರ್ಮುದ್ರಣಗಳಲ್ಲಿ ಇನ್ನು ಮುಂದೆ ಕಾಣಿಸಿಕೊಳ್ಳುವುದಿಲ್ಲ. ಈ ಸಂಗ್ರಹದ ಪ್ರಕಟನೆಯಿಂದ, ಅವುಗಳ ವೈಶಿಷ್ಟ್ಯಕ್ಕೆ ಚ್ಯುತಿ ಬಾರದಿರುವಂತೆಯೂ ನೋಡಿಕೊಳ್ಳಲಾಗಿದೆ.

ಮೈಸೂರು,
೮-೧೧-೪೭. } ಪ್ರಕಾಶಕರು

# ವಿವರ

ಪುಟ

# ಪ್ರೋಡತಿ

---

## ವನಸುಮ

ಅರಳಿತೀ ವನಸುಮವು ನಿನಗಾಗಿ, ಹರಿಯೇ,
ತ್ವರೆಯಿಂದ ಬಂದಿದನು ಸ್ವೀಕರಿಸು, ದೊರೆಯೇ.

ಹಗಲಿರುಳು ಮಳೆಬಿಸಿಲುಗಳಲಿ ವಿಕಸಿತವಾಯ್ತು,
ನಿಗಮಗೋಚರ, ನಿನ್ನಡಿಯ ಹೊಂದಲೆಂದು;
ಅಗಲಿತ್ತೈ ಸಕಲ ಸೌಖ್ಯಂಗಳನು ನಿನಗಾಗಿ;
ಖಗರಾಜಗಮನ, ಒಲಿದಿದನು ನೀಂ ಧರಿಸು!

ಮಗಮಗಿಪ ವಾಸನೆಯು ಇದಕಿಲ್ಲದಿರಬಹುದು,
ಜಗವ ಮೋಹಿಸುವ ರೂಪಿಲ್ಲದಿರಬಹುದು;
ಸೊಗಯಿಪಾ ಪೆಂಪೊಂದಿದಕಿಲ್ಲದಾದೊಡೆಯು,
ನಗಧರನೆ, ಕರುಣೆಯಿಂದಿದನು ನೀಂ ಧರಿಸು!

ಸಂಪಗೆಯ ಸೊಂಪಿಲ್ಲ, ಕೇತಕಿಯ ಕಂಪಿಲ್ಲ,
ಪೆಂಪಿನಾ ಪಾದರಿಯ ಮಾಧುರ್ಯವಿಲ್ಲ!
ಇಂಪುಬೆಡಗಿನಿತಿಲ್ಲದಾದೊಡೆಯು, ಮಾಧವನೆ,
ನೀಂ ಪೊರೆದಿದನು ಕೊರಳ ಹಾರದಲಿ ಧರಿಸು!

# ಕರೆಯೊಂದು ಬರುವುದೊ?

ಕರೆಯೊಂದು ಬರುವುದೋ? ನಾನಂತು ಅರಿಯೆ:
ಕಾಯುವೆನು ಕರೆ ಬರುವ ಸಮಯಂತ, ಪೊರೆಯೋ!

ತಂಬೆಲರು ತಳಿರಿನೆಡೆಯಾಡುತಿರಲಿನಿಯ,
ನೀನೆ ಬಂದೆಯೊ ಎಂದು ಹಾರುವುದು ಹೃದಯ;
ಸೊಬಗ ನೋಡಲು ನಾನು ಅರಳುತಿಹ ಅಲರ,
ಅಲರಿನೆಡೆಯಲ್ಲಿ ನೀನಿಹೆಯೆಂದು ಮನವು
ಹಂಬಲಿಸಿ ಹುಡುಕುತ್ತ ಅಲೆಯುವುದು, ಜೀವ!

ಹೆಮ್ಮೆಯಲಿ ಮಧುಮಾಸವೈತರಲು, ರಮಣ,
ಗಿಳಿವಿಂಡುಗಳು ಹಾಡೆ, ಸೃಷ್ಟಿ ನಲಿದಾಡೆ,
ಎಲ್ಲೆಲ್ಲು ಸಂತಸವು ಮೈದೋರೆ, ಎನ್ನ
ಎದೆಯಲ್ಲಿ ವಿರಹದುರಿಯುರಿಯುವುದು, ಚೆನ್ನ,
ಬಾರದಿರೆ, ತೋರದಿರೆ ನೀನು ಮನನನ್ನ!

ಹಕ್ಕಿ ಹಾಡಲು ನಿನ್ನ ಕೊಳಲ ದನಿಯಂತೆ
ಚಿಮ್ಮುವುದು ಜುಮ್ಮೆಂದು ಸಂತಸದಿ ಜೀವ!
ಗಾಳಿಯಲಿ ತರಗೆಲೆಗಳಾಡುತಿಹ ಸದ್ದು
ತೋರುವುದು ಹೆಜ್ಜೆ ಸಪ್ಪಳದಂತೆ ಎನಗೆ:
ಎಂದಿಗೈತರುವೆಯೋ ನಾನರಿಯೆ, ಚೆನ್ನ!

ದನಗಳಂಬಾ ಎನಲು "ಗೋಪಾಲ ಬಂದಾ!"
ಎಂಬಂತೆ ಕೇಳುವುದು ಮುಗ್ಧೆಯೀ ಮನಕೆ;
ಯಾರು ಕರೆದರು ನೀನೆ ಕರೆದಂತೆಯಾಗಿ
ಬೆಚ್ಚುವೆನು, ನೋಡುವೆನು ಸುತ್ತಲೂ ತಿರುಗಿ;
ನಾಚುವುದು ಎನ್ನ ಮನ ಕಾಣದಿರೆ ನಿನ್ನ!

ನಿನಗಿಂತಲೂ ಹೆಚ್ಚು ಬಳಿಯರಾದವರಿಲ್ಲ!
ನಿನಗಿಂತಲೂ ದೂರನಾದವರು ಇಲ್ಲ!
ನಿನಗಿಂತಲೂ ಮಧುರವಾದವರ ಕಾಣೆ!
ನಿನ್ನ ವಿನಾರಿಹ ಮಾಯಗಾರನನು ಕಾಣೆ!
ಏತಕಣಕಿಸೆ ಎನ್ನ? ಬಾ ಬೇಗ, ಚೆನ್ನ!

# ಅನ್ವೇಷಣೆ

(ಒಂದು ಅನುವಾದ)

ಜನ್ಮವು ಬರಿದಾಯ್ತೇ, ಹಾ!
ನಾನರಿಯದೆ ಜೀವೇಶನನು!

ಅರಸಿದೆನೆಲ್ಲಿಯು ದೊರಕನು ನಲ್ಲನು:
ಇನಿಯನೆಲ್ಲಿ ತಾನಡಗಿಹನೊ?
ತಳಿರೊಳು ಸೊಗದಲಿ ಕುಳಿತಿಹ ಕೋಗಿಲೆ
ಜಗದೊಡೆಯನ ನೀ ಕರೆಯುವೆಯಾ?
ಯಾವ ಬಾಸೆಯಲಿ ಕರೆಯುವೆ ಹೇಳೈ;
ಅಂತೆ ಕರೆಯೆ ನಾನೆಳಸುವೆನು.

ಮಹಿಮನ ವೈಮೆಯ ಮೊರೆವೆಯ, ತುಂಬಿಯೆ?
ಬೋಧಿಸು ಮುಗುದೆಗೆ, ಹಾಡುವೆನು.
ನಗುತಿಹೆ ಏತಕೆ, ನಲಿಯುವ ಹೂವೇ?
ನಿನಗೆ ದಯಾಂಬುಧಿ ಮೊರೆತಿಹನೆ?
ಬೇಡುವೆ, ನಮಿಸುವೆ, ಎನ್ನೆರೆಯನ ನೀ
ಮೋಹಿಸಿದಂದವ ತಿಳುಹೆನಗೆ.

ಅಂಬರ ಚುಂಬಿತ ನಿಶ್ಚಲ ಗಿರಿಗಳೆ,
ತಲೆಯೆತ್ತೇನನು ನೋಡುವಿರಿ?
ಬಾಳಿನ ಗುರಿಯನು ಪಡೆದಿಹರೇನು?
ದೊರೆಯನು ನೀವರಿತಿಹಿರೇನು?
ಗಿರಿಗಳೊ? ಧ್ಯಾನದಿ ಕುಳಿತಿಹ ಋಷಿಗಳೊ?
ಗುಟ್ಟನು ಹೇಳದ ಮೌನಿಗಳೊ?

ಸುಂದರ ಗಗನವೆ, ನೀಲಾವರಣದಿ
ಜೀವೇಶನ ಮರೆಸಿಹೆಯೇನು ?
ಕ್ಷಣವೊಂದೆ ಸಾಕು, ತೆರೆಮರೆಯನು ತೆರೆ :
ಕಣ್ಣೆದೆಗಳು ತಣಿವಂದದಲಿ
ಜೀವೇಶನ ನಾ ನೋಡುವೆನು !
ಬಯಕೆಯ ಬೇಗೆಯ ದೂಡುವೆನು !

# ಕರೆಯುವನು ಬಾರೆ ಸಖಿ !

ಕರೆಯುವನು ಬಾರೆ, ಸಖಿ, ಗೋಪ ಸುರುಚಿರ,
ಹರುಷದಿ ನಲಿಯುತ ಒಲುಮೆಯ ತೋರುತ !

ಗಹನ ಕುಸುಮ ಸರವ ಧರಿಸಿ ಲೀಲೆ ತೋರುತ
ಇಹಪರಗಳನಾಲಿಂಗಿಸುತ್ತೊಂದೆ ಕರದಲಿ !

ಎಲರು ಕುಸುಮಗಳಲಿ ನಲಿವ ತೆರದಿ ಎನ್ನ ಹೃದಯದಿ
ನಲಿಯುತಿಹನು, ನಲಿಯುತಿಪನು, ನಲಿಯುತಿರುವನು !

ನೀಲಗಗನಹಾಸದಿಂದ ಮೋಹಿಸಿರುವನು ;
ಪೋಗುವೆನು, ಪೋಗುವೆನು, ಪೋಗುವೆನು ನಾ !

ಮೇಘರಹಿತ ನೀಲನಭದ ದಿವ್ಯಪಥದಲಿ
ನಲಿನಲಿದು ತೇಲಿಬಹ ಸೋಮನಂದದಿ !

ಮೃತ್ಯುತಾಳದಿಂದ ನಲಿವ ಜನ್ಮಗಾನ ಹಾಡುತ
ಸಾಂತತೆಗೆ ನಾಂತತೆಯನಿರದೆ ಮೋಹಪಡಿಸುತ !

# ಬೃಂದಾವನ

ಬೃಂದಾವನವಿದುವೆನ್ನೀ ಹೃದಯವು
ಶ್ಯಾಮಸುಂದರನಲ್ಲಿಹನು !
ರಾಧೆಯನೊಡಗೂಡಲ್ಲಿ
ರಾಸಕ್ರೀಡೆಯನಾಡುವನು !

ಮಾಸಗಳೆಲ್ಲ ವಸಂತಗಳಲ್ಲಿ,
ವ್ಯಸನಗಳೆಲ್ಲಾನಂದಗಳಲ್ಲಿ.
ಕಾಲವು ಕಳೆಯದು ಇಲ್ಲಿ,
ಕಾಲನು ಜಿನರುವನಲ್ಲಿ ,
ಅಂತವನಂತ ವಾಗುವುದಲ್ಲಿ !

ಸುಮಗಳು ತುಂಬಿಯ ಚುಂಬಿಸವಲ್ಲಿ
ಹಿಮಮಣಿ ಹಸುರೊಳು ರಂಜಿಸವಲ್ಲಿ.
ಗಾಯನ ಸಲಿಲವ ಚೆಲ್ಲಿ
ಖಗತತಿ ನಲಿಯುವವಲ್ಲಿ ;
ಮಾರುತ ಸರಸವನಾಡುವನಲ್ಲಿ

ಇರವನೆ ಮರೆಯುವೈಕ್ಯದೊಳಲ್ಲಿ
ಸದಸದ್ಗಳು ಒಂದಾಗುವವಲ್ಲಿ.
ಜ್ಞಾನವು ಭಕ್ತಿಯೊಳಲ್ಲಿ
ರಮಿಪುದು ; ಪೂರ್ಣತೆ ಅಲ್ಲಿ
ನಲಿವುದು ನಿತ್ಯಾನಂದವ ಚೆಲ್ಲಿ !

# ಬಾರೊ ಬೇಗ

ಎಲ್ಲಿರುವೆ ? ಎಲ್ಲಿರುವೆ ? ಬಾರೊ ಬೇಗ ;
ವಿರಹವಿದ ತಾಳೆ ನಾ ಬಾರೊ ಬೇಗ !

ಮುಗಿಲಿನಂತೆ ಕವಿಕವಿದು ಬಾರೊ ಬೇಗ,
ಮಿಂಚಿನಂತೆ ಥಳಥಳಿಸಿ ಬಾರೊ ಬೇಗ,
ಸಿಡಿಲಿನಂತೆ ಭರಭರಿಸಿ ಬಾರೊ ಬೇಗ,
ಕಾರಿನಂತೆ ಸುರಿಸುರಿದು ಬಾರೊ ಬೇಗ.

ಉದಯದಂತೆ ನಲಿನಲಿದು ಬಾರೊ ಬೇಗ,
ಸಂಜೆಯಂತೆ ಮೆರೆಮೆರೆದು ಬಾರೊ ಬೇಗ,
ಮಧುವಿನಂತೆ ಮೋಹಿಸುತ ಬಾರೊ ಬೇಗ,
ಹೃದಯದಲ್ಲಿ ಕುಣಿಕುಣಿದು ಬಾರೊ ಬೇಗ.

ನಾಕಾರವಗಲಿ ಬಾ ಬಾರೊ ಬೇಗ,
ನಾಕಾರವಾಂತು ಬಾ ಬಾರೊ ಬೇಗ,
ನಾಂತತೆಯ ಬಿಸುಟು ಬಾ ಬಾರೊ ಬೇಗ,
ಸಾಂತತೆಯನಾಂತು ಬಾ ಬಾರೊ ಬೇಗ.

ನಿತ್ಯತೆಯನಗಲಿ ಬಾ ಬಾರೊ ಬೇಗ,
ಚಿತ್ತವನು ಚುಂಬಿಸುತ ಬಾರೊ ಬೇಗ,
ಮುಕುತಿಯನು ಬಿಸುಟು ಬಾ ಬಾರೊ ಬೇಗ.
ಬಂಧನವನೊಲಿದು ಬಾ ಬಾರೊ ಬೇಗ.

# ಪ್ರಿಯನ ನೆನೆ

ಪ್ರಿಯನ ನೆನೆ ಮನವೆ ನೀ
ಅನವರತ ಪ್ರಿಯನ ನೆನೆ.

ತೋರದಿರೆ ಮರೆಯದಿರು ;
ಬಾರದಿರೆ ಜರೆಯದಿರು ;
ತೋರಿ ತೋರದ ತೆರದಿ
ಬಂದು ಪೋಗುವನವನು !

ಕಂಬನಿಯು ಸುರಿಸುರಿದು
ಹಂಬಲಿಸು ಕರೆಕರೆದು ;
ನಂಬಿದಾ ಭಕ್ತರಿಗೆ
ಕಂಬದೊಳೂ ತೋರುವನು !

ಪ್ರಿಯನ ನೆನೆಯುವ ಹೃದಯ-
ದೊಳು ಬಹುದು ನವ ಉದಯ ;
ಆಗ ಮೈದೋರುವನು !
ನಿನ್ನನೇ ಸೇರುವನು !

# ನೀನೆ ವರವಾಗಿ ಬರುವೆ !

ಎನಗಾವ ಬಹುಮಾನವನು ಕೊಡುವೆ ನೀನು ?
ನಿನಗಾಗಿಯನುದಿನವು ಬಳಲುವೆನು ನಾನು !

ಅರಿವಿಗಾಗನುದಿನವು ಯತ್ನಿಸಿದವರಿಗೆಲ್ಲ
ಸರಸತಿಯು ಕೊಟ್ಟಿಹಳು ಕೀರ್ತಿಸುಖವ,
ಸಿರಿಗಾಗಿಯನವರತ ಹೋರಾಡಿದವರುಗಳಿ
ಗಿರದೆ ದಯಪಾಲಿಸಿಹಳಮಿತ ಧನವ !

ಅರಿಗಳನು ಕೆಣಕಿ ರಣರಂಗದಲಿ ಗೆಲಿದರಿಗೆ
ಧರೆಯು ಸಿರಿ ಕೊಟ್ಟಿಹಳು ದರ್ಪ ಸುಖವ !
ಧರೆಯುನನುದಿನ ಬೇಡಿ ಹೊಲಗೆಲಸವೆಸಗುವರಿ
ಗಿರದೆ ದಯಪಾಲಿಸಿಹಳನ್ನ ಸುಖವ !

ಸಿರಿಯು ಸರಸತಿ ಧರಾರಮಣಿಯಿವರೆಲ್ಲರೂ
ಬರಿದೆ ವರವೀಯುವರು ತಮ್ಮನುಳಿದು;
ಪರಮಾತ್ಮ, ನಿನ್ನನೇ ಬಯಸುತಿಹ ಎನಗೆ ನೀ
ವರವೀಯೆ, ನೀನೆ ವರವಾಗಿ ಬರುವೆ !

# ಮುರಳಿ ಶಿಕ್ಷ

ಶ್ರೀಯುತ ಎಚ್. ಮುಜುಂದಾರರ "Divine Flute"
ಎಂಬ ಚಿತ್ರವನ್ನು ನೋಡಿ ಬರೆದುದು.

ಕೊಳಲನೂದಿ ಮೋಹಿಪುದನು
ಕಲಿಸು ಎನಗೆ, ಚನ್ನ ,
ತಳಮಳಿಪುದು ಎನ್ನ ಎದೆಯು
ಕೊಳಲ ಗಾನ ನಿನ್ನ.

ನಲಿಯುತಿಹುದು ಉದಯ ಗಗನ
ಅರುಣರಾಗದಿಂದ
ಕೊಳದಲೆಗಳು ಕುಣಿಯುತಿಹವು
ಗಾನದೊಲುಮೆಯಿಂದ.

ಪರವಿಹಗಳ ನಲಿಸುತಿಹುದು
ನಿನ್ನ ಕೊಳಲ ನಾದ.
ಪರವಿಹಗಳನೊಲಿಸುತಿಹುದು
ನಿನ್ನ ಗಾನಮೋದ.

ತಳಿತ ಚೂತದಡಿಯ ಮೊದಲ
ನುಡಿಯ ಕಲಿಸು, ಚನ್ನ ;
ಕೊಳಲ ಕಲಿಸು ಬೇಗ ಎನಗೆ
ಮೋಹಿಸುವೆನು ನಿನ್ನ.

# ಮನುಜನೊಲವು

ಕಡಲಿನಾಳವು ಹಿರಿದು.
ಕಡಲಿಗಿಂತಲು ಮಿಗಿಲು
ಮನಸಿನಾಳ!

ಬಾನಿನಗಲವು ಹಿರಿದು.
ಬಾನಿಗಿಂತಲು ಮಿಗಿಲು
ಮನುಜನೆದೆಯು!

ತುಹಿನ ಗಿರಿಯದು ಹಿರಿದು.
ತುಹಿನ ಗಿರಿಗಿಮ್ಮಡಿಯು
ನರನ ಬಲವು!

ಮಳೆಯಬಿಲ್ಲದು ಚೆಲುವು.
ಮಳೆಯ ಬಿಲ್ಲನು ಮೀರಿ
ಮನುಜನೊಲವು!

# ತಳಿರೇಣಿ

ಮುಳುಗುವ ಸಂಜೆಯ ಕೆಂಪಳಿಯೆ,
ಮೆಲ್ಲನೆ ಇರುಳಿಳಿಯೆ,
ತಾರೆಗಳಾಗಸದೊಳು ಹೊಳೆಯೆ,
ಜೀವದ ಸಪ್ಪಳಿಯೆ,
ಮನೆ ಮನೆಯಲ್ಲಿ
ಬೆಳಕನು ಚೆಲ್ಲಿ
ಹಣತೆಯು ಸೊಡರಿನ ಕುಡಿ ಸುಳಿಯೆ !

ದೇವರ ಚಿಂತೆಯೊಳೆದೆಯುಬ್ಬಿ
ಶಾಂತಿಯು ಮೈದೋರೆ ;
ಭಕ್ತಿಯು ಬಳ್ಳಿಯವೊಲು ಹಬ್ಬಿ
ಪರಲೋಕವ ಸೇರೆ ;
ಒಲಿದಳಿದವರು
ಒಯ್ಯನೆ ಬಹರು
ಒಲ್ಮೆಯ ತಳಿರೇಣಿಯ ತಬ್ಬಿ !

ಬರುವನು ಚನ್ನನು ಹಿರಿಯವನು,
ತರುಣನು ಬಲಶಾಲಿ ;
ಸೋದರ ವಾಸುವು ಕಿರಿಯವನು
ಎನ್ನಯ ಕಣ್ಣಾಲಿ,
ಜೀವವ ಹಿಡಿದು
ದಾರಿಯ ನಡೆದು
ಬಳಲಿ ಸೊಂದು ಬೆಂದುರಿದವನು !

ಹಿರಿಯರು, ಪ್ರಾಜ್ಞರು, ಮೋಣೆನಗೆ
ಬಾಳನು ಕೊಟ್ಟವರು ;

ಮಣಿಯುತ ವಿನಯದೊಳೀಶನಿಗೆ
ಜೀವನ ಬಿಟ್ಟವರು !
ಸುಂದರಿ, ಚೆಲುವೆ,
ನನ್ನಾ ಚೆಲುವೆ
ಬರುವಳು ಶಾಂತಿಯ ಕೊಡುತೆನಗೆ !

ಮೆಲುನಡೆಯಿಕ್ಕುತ ಮೌನದಲಿ,
ಬೀಣೆಯು ದನಿಸುವಂತೆ,
ಬರುವಳು ರನ್ನೆಯು ಸ್ವಪ್ನದಲಿ,
ತಿಂಗಳು ಬರುವಂತೆ !
ಕೈಯನು ಹಿಡಿದು
ಮೌನದಿ ನುಡಿದು
ನೋಡುವಳಿನ್ನಂ ಪ್ರೇಮದಲಿ !

ಬಾಳಿನ ಬಳಲಿಕೆ ಜಾರುವುದು,
ಭಯ ಕೆಲಸಾರುವುದು !
ನೆಚ್ಚಿದೆಯೊಳು ವೈದೋರುವುದು,
ಹಿಗ್ಗುತ ಹಾರುವುದು !
ಬಾಳಿದರಂದು
ಬಳಿಗಿಳಿತಂದು
ನಲಿಯಲು ಸೊಗ ಮೊಗದೋರುವುದು !

# ಮನಸ್ಸು-ಹೃದಯ

ಬಾರ್ಡಿಲನ್ ನಿಂದ

ರಾತ್ರಿಗೆ ಸಾವಿರ ಕಣ್ಣುಗಳು,
ಹಗಲಿಗೆ ಕಣ್ಣೊಂದೆ;
ಆದರು ಹಗಲಿನ ಕಣ್ಣದು ಮುಳುಗಲು
ಲೋಕಕೆ ಬೆಳಕಿಲ್ಲ.

ಮನಸಿಗೆ ಸಾವಿರ ಕಣ್ಣುಗಳು,
ಹೃದಯಕೆ ಕಣ್ಣೊಂದೆ;
ಆದರು ಎದೆಯೊಲುಮೆಯು ಕಣ್ಮುಚ್ಚಲು
ಜೀವಕೆ ಬೆಳಕಿಲ್ಲ.

# ಹಾರೈಕೆ

ಶ್ರೀಯುತ ಎಚ್. ಮುಜುಂದಾರರ " In Expectation "
ಎಂಬ ಚಿತ್ರವನ್ನು ನೋಡಿ ಬರೆದುದು.

ಪಡುವಣ ದೆಸೆಯೊಳಗಿನ ತಾಸೀದನು ;
ಮಬ್ಬೆಲ್ಲೆಲ್ಲಿಯು ಹಬ್ಬಿದುದು !
ಬಯಕೆಯ ನೋಟವ ದೂರಕೆ ಕಳುಹಿ
ಬಾಲೆಯು ಗುಡಿಸಿಲ ಬಾಗಿಲೊಳು
ಇನಿಯನ ಬರವನೆ ಹಾರೈಸುತ್ತ
ನಿಂತಳು ತನ್ನಿರವನೆ ಮರೆಯುತ್ತ !

ಗೂಡಿಗೆ ಹೋದುವು ಹಕ್ಕಿಗಳೆಲ್ಲ,
ಗೋಗಳು ಬಂದುವು ಕೊಟ್ಟಿಗೆಗೆ ;
ಮೆರೆದುವು ನಭದೊಳು ತಾರೆಗಳೆಲ್ಲ,
ತುಂಬಿತು ಇಳೆಯನು ನೀರವತೆ :
ಬಾಲೆಯು ಬಯಕೆಯ ನೋಟಕೆ ಮಾತ್ರ
ಬತ್ತಲ್‌ಗತ್ತಲೆಯಾದುದು ಪಾತ್ರ !

# ನಟ್ಟ ನೋಟ

ಶ್ರೀಯುತ ಎಚ್. ಮುಜುಂದಾರರ "Lingering Look"
ಎಂಬ ಚಿತ್ರವನ್ನು ನೋಡಿ ಬರೆದುದು.

ಕೊಳದಾ ತೀರದ ಕಲ್ಲಿನ ಮೇಲೆ
  ಕುಳಿತಿಹ ರಮಣಿಯ ನೋಡಲ್ಲಿ!
ಕೊಡವಿದೆ ಅಂಕದ ಮೇಲಾಕೆಯ ಮನ
  ದೂರದೊಳೆಲ್ಲಿಯೊ ಚರಿಸುತಿದೆ.
ಆಕೆಯ ನಟ್ಟಿಹ ನೋಟವ ನೋಡು
ತೋರುವುದದರೊಳು ಚಿಂತೆಯ ಬೀಡು!

ಬಲವತ್ತರವಾದಾವುದೊ ಯೋಚನೆ
  ಆಕೆಯ ಮನವನು ತುಂಬಿಹುದು.
ಬಡತನದಳಲೋ? ಮಕ್ಕಳ ಗೋಳೋ?
  ಕಷ್ಟವೊ, ನಷ್ಟವೊ, ಸಿಸ್ಕಾರವೊ?
ಪ್ರೇಮದ ನೆನಪೋ, ಬಲ್ಲವರಾರು?
ಪ್ರಣಯದ ಭಂಗವೊ ತಿಳಿದವರಾರು?

ಕೋಗಿಲೆಯುಲಿಯನು ಬೀರುವುದಲ್ಲಿ,
  ಸರಸಿನ ಅಲೆಗಳು ಅಲೆಯುವುವು;
ಚೆಲುವಿನ ಕೆಂಪಿನ ಕಮಲಗಳೆಲ್ಲ,
  ತಂಬೆಲರೊಳು ನಲಿನಲಿಯುವುವು.
ಎಲ್ಲಿಹುದೋ ಮನದಾ ಸಂಚಾರ?
ತಿರುಗಾಡುವುದೆಲ್ಲಿಯೊ ಬಹುದೂರ!

ಆಕೆಯ ಭಾಗಕೆ ಕೋಗಿಲೆಯಿಲ್ಲ!
ತಾವರೆ ಹೂಗಳ ಕೊಳವಿಲ್ಲ!
ತಂಬೆಲರಿಲ್ಲಾ! ಪೊಸ ಹಸುರಿಲ್ಲ!
ಚಿಂತೆಯ ಹೊರತೇನೊಂದಿಲ್ಲ!
ಆಕೆಯ ನಟ್ಟಾ ನೋಟದೊಳಿಲ್ಲ
ಕರಗುತಲಳಿದುವು; ಬೇರೊಂದಿಲ್ಲ!

# ವಿರಹಿಣಿ

ಏಕೆ ರಮಣಿ ಮರುಗುವೆ,
ಏಕೆ ಕೊರಗುವೆ ?
ಆರಿಗಾಗಿ ಕಾಯುವೆ,
ಏಕೆ ನೋಯುವೆ ?

ಹುಡುಕಿಯುವನ ಬನಗಳಲಿ
ತಿರುಗಿ ತೊಳಲಿದೆ ;
ಕೂಗಿ ಕರೆದು ಹೊಳೆಯ ಬಳಿ
ಬರಿದೆ ಬಳಲಿದೆ.
ಇನಿಯಗಾಗಿ ಕಾಯುತಿಹೆ !
ವಿರಹದಿಂದ ನೋಯುತಿಹೆ !

ಅವನಿಗಾಗಿ ಹೂಗಳನು
ಬನದೊಳಾಯ್ದೆನು ;
ಅವನಿಗಾಗಿ ಮಾಲೆಯನು,
ಮುದದಿ ನೆಯ್ದೆನು ;
ಕೈಯ ಮಾಲೆ ಬಾಡುತಿದೆ !
ಎದೆಯೊಳಳಲು ಮೂಡುತಿದೆ !

ಸುತ್ತಲಿರುಳು ಕವಿಯುತಿದೆ !
ನಲ್ಲ ಬಾರನೆ ?
ಚಿತ್ತವಳುಕಿ ನಡುಗುತಿದೆ !
ಮೊಗವ ತೋರನೆ ?
ಬರುವತನಕ ಕಾಯುವೆನು !
ಹರುಷಕಾಗಿ ನೋಯುವೆನು !

— ಗ

ಪೇರಲ ಮರದಡಿ ಹಣ್ಣನು ತಿನ್ನುತ
      ಮಲಗಿರೆ ಹಸುರೊಳು ನೀ ಬಂದೆ;
ಕರಿ ಕುರುಳಿನ ಸುರಮೋಹವನೆರಚುತ
      ಹೊಸ ವೈಯಾರದಿ ನೀ ಬಂದೆ;
ನೋಡಿದೊಡೆನ್ನನು ದೂರದಿ ನಿಂತೆ;
ಮೂಡಿತು ಹೃದಯದೊಳೊಲವಿನ ಚಿಂತೆ!

ಬೆಳಗಿನ ಸೂರ್‍ಯನ ಕಾಂತಿಯು ನಾಡಿನ
      ಮಧುವನಗಳ ಮೇಲೊರಗಿತ್ತು;
ನಿರ್ಜನ ದೇಶದ ಮೌನದ ಭಾರವು
      ಹಕ್ಕಿಗಳುಲಿಯಿಂದೋಡಿತ್ತು;
ರಾತ್ರಿಯ ಗಗನದ ಚಂದಿರನಂತೆ,
ತರಳೆಯೆ, ಮೋಹಿಸಿ ದೂರದಿ ನಿಂತೆ!

ಮೊಗದೊಳು ಸೊಬಗಿನ ಸುಗ್ಗಿಯು ಬೆಳೆದು
      ಕೈಬೀಸೆನ್ನನು ಕರೆದಿತ್ತು;
ತುಂಬಿಯು ತುಳುಕದ ತಿಳಿಗೊಳವಂತೆ
      ಕಂಗಳ ಲೀಲೆಯು ಮೆರೆದಿತ್ತು.
ಹೃದಯದ ಬಾಳಿನ ಕಂಪುಸಿರಂತೆ
ಬದುಕಿನ ಹೊಳೆಯನು ಹೀರುತ ನಿಂತೆ!

ನಿನ್ನಾ ಬಾಳಿನ ಹೂವನು ಮುಡಿಯದೆ
      ಮುದ್ದಿಸಿಯನುಭವಿಸಪ್ಪದಲೆ
ಹೋಗುವೆಯೆಂದಾಗರಿತಿರಲಿಲ್ಲ;
      ಸೊಬಗಿನ ಕುಸುಮವೆ ಉದುರಿದೆಯಾ?
ಹೂವೇ, ತರಳೆಯೆ, ಕೊಯ್ಯುವ ಮುನ್ನ
ಕೊಂಡೊಯ್ದಿತೆ ಬಿರುಗಾಳಿಯು ನಿನ್ನ!

ಪೇರಲ ಮರದಡಿ ಒಲಿದೆನು ಅಂದು ;
ಒಲಿದಿಹೆ ನಾ ಮುಂದೆಂದೆಂದು.
ಎನ್ ತೋಟದೊಳಲರಿರದಿರಲೇನು ?
ನಿನ್ನ ನೆನಪೇ ಸಿರಿಯಲರು.
ಚಲಿಸುವ ಮನಸಿಗೆ ನೀ ಹೂಬೇಲಿ !
ಘರ್ಮದ ನಾರಿಯೊಳೆಳೆಯುವ ಕಾಳಿ !

ಸುಮರಹಿತಾತ್ಮಾರಾಮವ ಕಂಡು
ತಲ್ಲಣಿಪುದು ಮನವಾಗಾಗ ;
ನೆನೆಯಲು ನಿನ್ನನು, ಬಾಡಿದ ಹೂವೇ,
ತಲ್ಲಣ ತೊಲಗುವುದತಿ ಬೇಗ :
ಬೇರೆಯ ಹೂಗಳ ಮುಡಿಯೆನು ನಾನು,
ಮರೆಯಾದರು ಮುಡಿಪಾಗಿಹೆ ನೀನು !

ಪ್ರೇಮದ ಗೀತಿಕೆಯಂದದಿ ಬಂದೆ,
ಕೊಳಲನು ಊದುತ ಐತಂದೆ;
ಧರ್ಮಶ್ಲೋಕದ ತೆರದೊಳು ಹೋದೆ,
ನೀತಿಯ ವೀಣೆಯು ನೀನಾದೆ !
ಎಂದೋ ಕೇಳಿದ ಗೀತವು ಇಂದು
ಮೊರೆಯುವುದೆದೆಯೊಳು ಮುಂದೆಂದೆಂದೂ !

# ರತಿ

ಪ್ರಣಯದ ಗೀತೆಯೆ ನೀನಾಗಿರುವೆ.
ನಿನ್ನನು ರಚಿಸಿದ ಕವಿ ಯಾರು?
ಪುಣ್ಯದ ಮುದ್ದೆಯ ಸಗ್ಗದ ಸೊಬಗಿನ
ಬಣ್ಣದೊಳದ್ದುತ, ನಿತ್ಯತೆಯೊಲುಮೆಯ
ಕಂಪಿನೊಳೂಡುತ, ಭಾವದ ಚಾಣದಿ
ನಿನ್ನನು ಕೆತ್ತಿದ ಶಿಲ್ಪಿಯದಾರು?
ಬಿದಿ ತಾನೊಬ್ಬನೆ ಬೇಸರ ಕಳೆಯಲು
ನಿನ್ನನು ಹಾಡಿದನು;
ಕಂಗಳಿಗಂದದ ಮಾದರಿದೋರಲು
ನಿನ್ನನು ಮಾಡಿದನು.

ವೀಣೆಯ ವಾಣಿಯೆ ನೀನಾಗಿರುವೆ,
ನಿನ್ನನು ಬಾರಿಸಿದವರಾರು ?
ತಳಿತಿಹ ವನದೊಳು ಹೀಲಿಯ ಕಂಗಳ
ಕೆದರಿದ ನವಿಲಿನ ಮುಕ್ತಿಯ ಬೆಡಗಿಗೆ
ಚೈತ್ರದ ಬಣ್ಣದ ಸಿರಿಯನು ಸೇರಿಸಿ
ನಿನ್ನನು ನೆಯ್ದಾ ರಸಋಷಿ ಯಾರು?
ಕಾಣದ ಊರಿನ ಮಾಯಾವೈಣಿಕ
ಬಾರಿಸಿದನು ನಿನ್ನ.
ನೆಯ್ದನು ಸೃಷ್ಟಿಯ ರಾಗದ ಜಾಲವ
ತಾ ನೆಯ್ಯುವ ಮುನ್ನ.

ಮುದ್ದಿನ ಮುದ್ದೆಯೆ ನೀನಾಗಿರುವೆ,
ಮುದ್ದನು ಮುದ್ರಿಸಿದವರಾರು ?
ಕೂಸಿನ ಕೆನ್ನೆಯ ತಾಯಿಯ ಮುತ್ತನು,
ನಲ್ಲಳ ಕೆನ್ನೆಗಳಿನಿಯನ ಮುತ್ತನು,

ಎಲ್ಲರ ಹೃದಯದ ದೇವರ ಮುತ್ತನು
ಪೋಣಿಸಿ ನಿನ್ನನು ಮಾಡಿದರಾರು ?
ಹೂಗಳ ಮೇಲಿಹ ಗಾಳಿಯು ಚುಂಬನ
ವನು ಸುಲಿಗೆಯ ಮಾಡಿ
ಕಲ್ಪನೆ ನಿನ್ನನು ಕಡೆಯಿತು, ತರಳೆಯೆ
ನಗೆದಿಂಗಳ ಬೇಡಿ.

ಚೆಲುವಿನ ಗೆಲವೇ ನೀನಾಗಿರುವೆ,
ನಿನ್ನನು ಮೂರ್ತಿಸಿದವರಾರು ?
ಉದಯಾಸ್ತಂಗಳ ಪೆಂಪನು ಆಯ್ದು,
ತಿಳಿಬೆಳುದಿಂಗಳ ಸೊಂಪನು ಹೊಯ್ದು,
ರಾತ್ರಿಯ ಕಪ್ಪಿನ ಹೆಪ್ಪನು ಹಾಕಿ
ನಿನ್ನೀ ಚೆಲುವನು ಮಥಿಸಿದರಾರು ?
ನೀನವ್ಯಕ್ತದ ಗರ್ಭದೊಳುರಿಯುವ
ಮಂಗಳದಾರತಿಯು ;
ಸೃಷ್ಟಿಯ ಮುಂದಕೆ ಪ್ರೇರಿಪ ಪ್ರೇಮದ
ಶಕ್ತಿಯ ಮೂರುತಿಯು.

ಸೃಷ್ಟಿಯ ಮೋಹವೆ ನೀನಾಗಿರುವೆ,
ನಿನಗಾರಿತ್ತರು ಮೋಹವನು ?
ಉದಯದ ಮೋಡಗಳಂಚಿನ ಮೇಲೆ
ನಲಿಯಲು ನಿನ್ನಯ ನಲ್ಮೆಯ ಲೀಲೆ
ಕಾಣಿಕೆ ಕೊಡುವುವು ತರುಲತೆ ತಮ್ಮ
ಹೂಗಳ ಫಲಗಳ ಮುಡುಪನು ತಂದು
ಸ್ವರ ನೈವೇದ್ಯವ ಸುರಿವುವು ಖಗಗಳು
ಮೋಹಕೆ ಮರುಳಾಗಿ !
ಸೃಷ್ಟಿಯ ಸೌಂದರವೆಲ್ಲಾ ನಿನ್ನೀ
ಚೆಲುವಿಗೆ ಶರಣಾಗಿ !

ಜೀವಕೆ ಜೀವವೆ ನೀನಾಗಿರುವೆ,
ನಿನಗಾರಿತ್ತರು ಜೀವವನು ?
ಶೂನ್ಯ ಸಮಾಧಿಯೊಳಿದ್ದಾ ಬ್ರಹ್ಮನ
ಚುಂಬಿಸಿ ಎಚ್ಚರಗೊಳಿಸಲು ನೀನು,
ನಿನ್ನಾ ಪ್ರೀತಿಯು ಮುತ್ತಿನ ಲೀಲೆಂಗೆ
ಉದಿಸಿತು ವಿಶ್ವದ ಸಕಲೈಶ್ವರ್ಯ !
ಸೃಷ್ಟಿಯು ಬಾಳನು ರಕ್ಷಿಸುತಿರುವುದು
ನಿನ್ನೊಲುಮೆಯು ಪಾಶ :
ನಿನ್ನಾ ಪ್ರೇಮವಿಲಾಸದ ನಾಶಗೆ
ಇದೆ ಜಗದ ವಿನಾಶ !

# ಅಗಸ್ತ್ಯ

ದಿನವೊಂದರೊಳೆ ನಿನ್ನ ಎದೆಯ ರಸವನು ಹೀರಿ
ಸರ್ವಸ್ವವನು, ನಲ್ಲೆ, ಸುಲಿಯಬಲ್ಲೆ !
ಮುತ್ತೊಂದರೊಳೆ ಮೊಗೆದು ಮನದಣಿಯೆ ಸೇಂದಿಯಂತೆ
ಆನಂದದಮರತೆಯ ಪೊಂದಬಲ್ಲೆ !

ಒಂದೆ ಆಲಿಂಗನದೊಳಿಹಪರಗಳೆರಡನೂ
ನೋಯಿಸದೆ ಒಲಿದು ನಾನಪ್ಪಬಲ್ಲೆ !
ಕಣ್ಣೊಂದು ನೋಟದೊಳೆ ಮಳೆಯಬಿಲ್ಲನು ನಗುವ
ನಿನ್ನ ಸೊಬಗೆಲ್ಲವನು ಕದಿಯಬಲ್ಲೆ !

ಸಂಯೋಗವೊಂದರೊಳೆ ನಿನ್ನ ನುಣ್ಣನೆ ನೊಣೆದು
ರಸಪೂರ್ಣ ಶೂನ್ಯತೆಗೆ ಕಳುಹಬಲ್ಲೆ !
ಮಲಗಿರುವ ಬಡಬಾಗ್ನಿ ನಾನೆನ್ನ ಕೆಣಕದಿರು :
ಗುಟುಕೊಂದರಲಿ ಕಡಲ ಕುಡಿಯಬಲ್ಲೆ !

# ಹಳ್ಳಿಯ ಹುಡುಗಿ

ಹುಲ್ಲಿನ ಹೊರೆಯನು ತಲೆಯೊಳು ಹೊತ್ತು
ಹುಡುಗಿಯು ಬಂದಳು ಹಾದಿಯಲಿ.
ಮಲೆನಾಡಿನ ಗಿರಿಗಳ ತುದಿ ಹೊತ್ತು
ಮುಳುಗುತಲಿದ್ದಿತು ಬೈಗಿನಲಿ.
ಹುಡುಗಿಯು ಕಂಗಳಲೆಸೆದುದು ಸಂಜೆ
ಮೋಹನವಳಿಪೆಯೊಳು ಹಕ್ಕಿಗಳೆಲ್ಲಾ
ಬೈಗಿನ ಹಾಡನು ಹಾಡಿದುವು,
ಕಬ್ಬದ ಹಬ್ಬವ ಮಾಡಿದುವು.

ತಂಗಿಯು ಬಡತನದುಡೆಯನು ಉಟ್ಟು
ರತಿಯಂತೆಸೆದಳು ಕಂಗಳಿಗೆ;
ತಾಯಿಯು ಬಡತನದೊಡವೆಯ ತೊಟ್ಟು
ಮಂಗಳವಾದಳು ಎನ್ನೆದೆಗೆ;
ಯಾವುದೊ ಹಳ್ಳಿಯ ಲಾವಣಿ ಹಾಡುತ
ಬಾಲೆಯು ಬಂದಳು ನನ್ನೆದುರಾಡುತ:
ಏಕೆಂದರೆ ನಾನವಳಲ್ಲಿ
ಕರ್ಪೂರವ ಕಂಡೆನು ಲೀಲೆಯಲಿ.

ನೋಡಿದಳೆನ್ನನು ತಲೆಯನು ಎತ್ತಿ
ನುಡಿದಳು ನಾಚಿಕೆಯಿಲ್ಲದಲೆ.
ದನಿಯಲಿ ಮುಗ್ಧತೆ ಮೈದೋರಿತ್ತು.
ಮಿಂಚಿತು ಮೊಗವಾನಂದದಲಿ.
ಅರಳಿದ ಹೂವುಗಳಿದ್ದುವು ಸುತ್ತ;
ಆದರು ಹಳ್ಳಿಯ ಹುಡುಗಿಯ ಚಿತ್ತ
ಹೂವುಗಳೆಲ್ಲವನೇಳಿಸಿತು
ಮೋಹನವರಿಂಪನು ಚಾಳಿಸಿತು.

ಹಳ್ಳಿಯ ಹುಡುಗಿಯು ಹೊರಟಳು ಮುಂದೆ
  ಹಸುರಿಂದೆಸೆದಾ ಹಾದಿಯಲಿ ;
ದೇವಿಯ ಭಕ್ತನು, ಕುರಿಮರಿ, ಹಿಂದೆ
  ಮೆಲ್ಲನೆ ನಡೆದುದು ಮೌನದಲಿ.
ನೋಡಿದೆನವರನು ಹಿಂದಕೆ ತಿರುಗಿ
ತನು ಮನ ಎದೆ ಬಾಳೆಲ್ಲಾ ಕರಗಿ.
  ವರವನು ಸಲ್ಲಿಸಿದೀಶನನು
  ಎಂದೂ ನಾನಂತೀಕ್ಷಿಸೆನು !

# ಅಂಗಳದವರೆಯ ಚಪ್ಪರದಡಿಯಲಿ

೭

ಅಂಗಳದವರೆಯ ಚಪ್ಪರದಡಿಯಲಿ
ಮೈಮರೆತೊರಗುವುದಾನಂದ!
ಮಲೆಗಿರಿ ನಡುವಗಲುರಿಬಿಸಿಲಲ್ಲಿ,
ಬೇಸಗೆ ಬಿಸಿಯುಸಿರಾಡುತಿರೆ,
ಹಸುರಾದೆಲೆಗಳ ಬಳ್ಳಿಯ ಕೆಳಗಡೆ,
ತಂಪೊಳು ತೇಲುವುದೆನಿತಂದ!
ಬಣ್ಣದ ಹೂವಿನ ಪಕ್ಕೆಯು ಹಾರುತ
ಅವರೆಯ ಹೂವನು ಕುಡಿಯುತಿರೆ,
ಕೋಮಲಕಾಯದ ಬಣ್ಣದ ಚಿಟ್ಟೆಯು
ಕಣ್ಮನ ಮೋಹಿಸಿ ಹಾರುತಿರೆ,
ಹೊಳೆಯುವ ಕರಿಮೈ ಬಣ್ಣದ ದುಂಬಿಯು
ಹಾಡುತ ಝೇಂಕರಿಸಾಡುತಿರೆ,
ಕಬ್ಬದ ಹೆಣ್ಣನು ತಬ್ಬುತ ಒಬ್ಬನೆ
ಮುದ್ದಿಸಿ ಮುತ್ತಿಡೆ ಎನಿತಂದ!
ಹಗಲಿನ ಕನಸಿನ ಸೊಬಗಿನ ಊರಿನ
ಬನಗಳಲಲೆಯುವುದೆನಿತಂದ!
ಮೌನದ ಗೀತೆಯನಾಲಿಸಿಯಾಲಿಸಿ
ಕನಸಿನೊಳಲೆಯುವುದೇನಂದ!
ನೀರವ ವೀಣೆಯ ವೇಣುವನಾಲಿಸಿ
ಸೊಬಗನು ಹೀರುವುದೇನಂದ!
ಮಾಯೆಯ ನೆನೆನೆನೆದಣಕಿಸುತವಳನು
ಪೀಡಿಸಿ ಹಿಗ್ಗುವುದೆನಿತಂದ!
ಅಂಗಳದವರೆಯ ಚಪ್ಪರದಡಿಯಲಿ
ಮೈಮರೆತೊರಗುವುದಾನಂದ!

# ಸೋಮಾರಿಯ ಹಾಡು

ಈ ಮರವಡಿಯಲ್ಲಿ
ಗಾಳಿಯ ತಂಪಿನಲಿ
ನಲಿಯುವ ಹಸುರಿನಲಿ
ಜೀವನ ಮರೆಯುವ ಕೊಳಲೂದಿ!
ಬಾ ರಮಣಿ
ಬಾ ರಮಣಿ
ಬಾ, ಬಾ; ಬಾ, ಬಾ; ಬಾ ರಮಣಿ!

ತೊರೆಯುತೆ ಬೀಡುಗಳ
ಹಾಡುತ ಹಾಡುಗಳ
ಆಡುತ ಆಟಗಳ
ಕರ್ಮವ ಕರಗಿಸಿ ಲೀಲೆಯಲಿ,
ನಲಿ ರಮಣಿ
ಒಲಿ ರಮಣಿ
ನಲಿ ಬಾ, ಒಲಿ ಬಾ, ಬಾ ರಮಣಿ!

ಹಾಡಲಿ ಹಕ್ಕಿಗಳು
ಮೆರೆಯಲಿ ಕಾಡುಗಳು
ನಲಿಯಲಿ ಹೂವುಗಳು–
ದುಂದನು ಮಾಡುವ ಜೀವವನು!
ಬಾ ರಮಣಿ
ಬಾ ರಮಣಿ
ಬಾ, ಬಾ; ಬಾ, ಬಾ; ಬಾ ರಮಣಿ!

ಹುಚ್ಚರು ನಾವುಗಳು,
ಕೆಚ್ಚೆದೆಯಾಳುಗಳು ;
ಪೆಚ್ಚರು ನೀವುಗಳು
ನೆಚ್ಚಿನ ಮೆಚ್ಚಿಕೆಯಾಳುಗಳು !
ನಲಿ ರಮಣಿ
ಒಲಿ ರಮಣಿ
ನಲಿ ಬಾ, ಒಲಿ ಬಾ, ಬಾ ರಮಣಿ!

ಬಹು ಸೋಮಾರಿಗಳು,
ಸುಖಿಗಳು ನಾವುಗಳು !
ಇಹಪರವಾಳುವೆವು !
ಭಾರವ ಬಿಸುಡುತ ಬಾಳುವೆವು !
ಬಾ ರಮಣಿ
ಬಾ ರಮಣಿ
ಬಾ, ಬಾ ; ಬಾ, ಬಾ : ಬಾ ರಮಣಿ !

# ದೋಣಿಗನ ಹಾಡು

ದೂರಾ! ಬಹು ದೂರಾ! ಹೋಗುವ ಬಾರಾ!
ಅಲ್ಲೀ ಇಹುದೆಮ್ಮಾ ಊರಾ ತೀರಾ!
ದೂರ ದೂರ ಹೋಗುವ ಬಾರ
ಅಲ್ಲಿಹುದೆಮ್ಮಾ ಊರ ತೀರ.
ಚಲಜಲದಲೆಗಳ ಮೇಲ್ಕುಣಿದಾಡಿ
ಬಳಲಿಕೆ ತೊಳಲಿಕೆಗಳನೆಲ್ಲ ದೂಡಿ
ಗೆಲವಿನ ಉಲಿಗಳ ಹಾಡಿ
ಒಲುಮೆಯ ಮಾತಾಡಿ
ಹಕ್ಕಿಗಳಿಂಚರ ಕೇಳಿ
ಆನಂದವ ತಾಳಿ
ಹಿಮಮಣಿ ಕಣಗಣ ಸಿಂಚಿತ ಅಂಚಿನ
ಹಸುರಿನ ತೀರದ ಮೇಲಾಡಿ,
ಕಿಸಲಯಕಂಪನದಿಂಪನು ನೋಡಿ
ಕೂಡಿ ಆಡಿ ನೋಡಿ ಹಾಡಿ
ತೇಲಿ ತೇಲಿ ಹೋಗುವ ಬಾರ.
ಅಲ್ಲಿಹುದೆಮ್ಮಾ ಊರ ತೀರ.
ದೂರಾ! ಬಹುದೂರಾ! ಹೋಗುವ ಬಾರಾ!
ಅಲ್ಲೀ ಇಹುದೆಮ್ಮಾ ಊರಾ ತೀರಾ!

# ಗಾನ ದರ್ಶನ

ಹಾಡುವನು ಹಾಡುವನು
ಕೊಳಲನೂದುತ ;
ಕುಣಿಯುವರು ಕುಣಿಯುವರು
ಮನವ ಮರೆಯುತ.

ಆದಿಯಂತ್ಯವಿಲ್ಲದೆ
ದಣಿವ ತಣಿವ ಕಾಣದೆ
ನಿತ್ಯದಾರಾಮದಿ
ಪ್ರೇಮ ಭಕ್ತಿ ತೋರುತ–

ವಿಶ್ವಮೌನವಾಂತಿದೆ
ಕಾಲದೇಶವೆಲ್ಲವು
ಭಾವದಾವೇಶದಿ
ನೋಡುತಿಹವು ಚಲಿಸದೆ.

ಮೂಡಣದ ಗಗನದಲಿ
ರವಿಯುದಯ ನಲಿಯುತಿದೆ ;
ತಳಿರಿನೊಳು ತಂಬೆಲರು
ಲೀಲೆಯಾಡುತಿರುವುದು !

ಹೊಸ ತಳಿರೊಳು ಹಿಮಮಣಿಗಳು
ಥಳ ಥಳಿಸವು ಮನಮೋಹಿಸಿ,
ಮೋಘದಿಂದ ಉದುರಿದ
ರತುನ ಸೇಸೆಯಂದದಿ !

ಹಾಡುತಿರೆ ವಿಹಂಗವು
ದಿವ್ಯ ಉದಯರಾಗವ
ನಸುನಗುತಿಹ ಪೊಸಚಿಗುರಿನ
ಕುಸುಮವಿಡಿದ ಹಸುರಮೇಲೆ–

ಸುಮಗಳನು ಕೊಯ್ದು ಕೊಯ್ದು
ಮಾಲೆಗಳ ನೆಯ್ದು ನೆಯ್ದು
ಬಳಸಿ ಬಂದು, ಬಳಿಯೆ ನಿಂದು
ಮಾಲೆ ಹಾಕಿ ಚುಂಬಿಸೆ!–

ಯುಗ ಯುಗಗಳು ನೆಗೆ ನೆಗೆವುವು!
ಕಲ್ಪಗಳು ಜಾರುವುವು!
ಕಮಲಜರು ಸವೆಯುವರು!
ಪ್ರಳಯಗಳು ಕಳೆಯುವುವು!

# ರಾಧೆಯ ಕರೆ

ಎದೆಯ ಬನಕೆ ಬಾರೊ ನೀ
ಗೋಪಬಾಲನೆ ;
ಮುದದಿ ಶಶಿಯ ಕಿರಣ ನಿನ್ನ
ಕರೆಯುತಿರುವುದು.

ರಮ್ಯವೀ ಚಕೋರವು
ಬಯಸಿ ನಿನ್ನನೆ
ಹಾಡುತಿಹುದು ಸಲಿಲದಂತೆ
ಸುರಿವ ಗಾನವ.

ನಿನ್ನ ನಿದಿರು ನೋಡುತ
ಪೊನ್ನ ಸುಮಗಳು
ಜೊನ್ನ ಕಾಂತಿಯೆಂಬ ಜಲದಿ
ಮಿಂದು ನಿಂತಿವೆ.

ನಿನ್ನ ನೋಡೆ ಗಗನವು
ಕಾತರಿಸುತಿದೆ ;
ನಿನ್ನನೊಲಿಯೆ ತಾರಕೆಗಳು
ಮಿಣುಕುತಿರುವುವು.

ನಿನ್ನ ಗೆಳೆಯನಾಗಲು
ಚರಿಪನನಿಲನು ;
ನಿನಗೆ ಹರುಷವೀಯಲೆಂದು
ಧರಣಿ ನಲಿವಳು.

ಪರಮ ಪುರುಷ ಬಾರೆಲೈ ;
ಮುದವ ತಾರೆಲೈ.
ಪರಮತನವನುಳಿದು, ಕಾಂತ,
ಕೃಪೆಯ ತೋರೆಲೈ !

# ಬಾ, ಬಾ!

ಸುಂದರ ದಿನ, ಸುಂದರ ಇನ,
ಸುಂದರ ವನ, ನೋಡು ಬಾ!
ಎಳಬಿಸಿಲೊಳು ತಿಳಿಗೊಳದೊಳು
ಜಲದಲೆಗಳು ನಲಿನಲಿಯಲು,
ನೋಡು, ಬಾ! ಕೂಡು, ಬಾ!
ಬೇಗ ಬಾ! ಬಾ! ಬಾ!

ತಣ್ಣೆಲರಲಿ ಹೂಗಳ ಬಳಿ
ಸೊಕ್ಕಿದ ಅಳಿ! ನೋಡು, ಬಾ!
ಹೊಸ ತಳಿರೊಳು ಇಂಗೊರಲೊಳು
ಕೋಗಿಲೆಗಳು ಸರಗೈಯಲು,
ಹಾಡು, ಬಾ! ಕೂಡು, ಬಾ!
ಬೇಗ ಬಾ! ಬಾ! ಬಾ!

ಜೊತೆಯಿಲ್ಲದೆ ನನ್ನೊಲಿದೆದೆ
ಕಂಪಿಸುತಿದೆ; ಕೂಡು, ಬಾ!
ಹೊಸ ಹಸುರೆಡೆ, ತಿಳಿಗೊಳದೆಡೆ,
ನಾ ನಿನ್ನೆಡೆ, ನೀನೆನ್ನೆಡೆ!
ಕೂಡು, ಬಾ! ಹಾಡು, ಬಾ!
ಬೇಗ ಬಾ! ಬಾ! ಬಾ!

# ಪ್ರಣಯದ ದೂರದಾಸೆ

ಒಲವೂ, ನಲವೂ, ಚೆಲುವಿನ ಗೆಲವೂ,
ಅಂದದಿ ಚೆಂದದಿ ಬರುವಾನಂದವು,
“ ನಶ್ವರ! ನಶ್ವರ! ” ಎಂಬರದೇಕೆ?
ನಶ್ವರವಲ್ಲವು ಶಾಶ್ವತ, ಗಿರಿಜೆ!
ಎಂದೋ ಎಂತೋ ಒಂದೆಡೆಯಂತೂ
ಗಿರಿಜೇ, ಮೇಳಿಸಿ ನಾವುಗಳು
ಎಂದೋ ಎಂತೋ ಎಲ್ಲಾದರಂತೂ
ನಮ್ಮಾ ಪ್ರಣಯವು ಫಲಿಸುವುದು!
ತರಳೇ, ನಿಶ್ಚಯ ಫಲಿಸುವುದು!

ಗಗನದ ಉಡುಗಳು ಮಿರುಗುವುದೇಕೆ?
ಅಗಲಿದ ಯಾರನೊ ಸೇರುವೆವೆಂದು!
ವನಗಳು ಬುವಿಯನು ಒಲಿಯುವುದೇಕೆ?
ವಿಯೋಗ ದುಃಖವ ಕಳೆಯುವೆವೆಂದು!
ಎಂದೋ ಎಂತೋ ಒಂದೆಡೆಯಂತೂ
ಅವರಾ ಬಯಕೆಯು ಲಭಿಸುವುದು!
ಎಂದೋ ಎಂತೋ ಎಲ್ಲಾದರಂತೂ
ಅಗಲಿದ ಇನಿಯನ ಸೇರುವುವು!
ಗಿರಿಜೇ, ನಿಶ್ಚಯ ಸೇರುವುವು!

ಯಾರನೊ ಹುಡುಕತಲಿರುವರು ಎಲ್ಲಾ;
‘ ಯಾರನು’ ಎಂದರೆ ತಿಳಿದವರಿಲ್ಲ;
ಎಂದೋ ಯಾರನೊ ಅಗಲಿದೆವೆಂದು
ಅರಸುತಲಿರುವರು ಕಲ್ಪಗಳಿಂದ!

ಎಂದೋ ಎಂತೋ ಒಂದೆಡೆಯಂತೂ
ಗಿರಿಜೇ, ಮೇಳಿಸಿ ನಾವುಗಳು,
ಎಂದೋ ಎಂತೋ ಎಲ್ಲಾದರಂತೂ
ನಮ್ಮಿ ಪ್ರಣಯವು ಫಲಿಸುವುದು
ತರಳೇ, ನಿಶ್ಚಯ ಫಲಿಸುವುದು !

# ಶರದೃತು

ತೆನೆಯ ಕಂಪುಗಾಳಿ ಬೀಸಿ ಬರುತಲಿರುವುದು ;
ಗದ್ದೆಗಳಲಿ ಪೈರು ತಲೆಯ ತೂಗುತಿರುವುದು ;
ಗಿರಿಜೆ, ಬಾರೆ, ವನಗಳಲ್ಲಿ ತಿರುಗಿ ನಲಿಯುವ,
ಒಲಿದ ಎದೆಯ ಮುದ್ದಿಸುತ್ತ ಮತ್ತೆ ಒಲಿಯುವ !

ಸಗ್ಗದಮಲ ಸೊಬಗು ತಿರೆಯ ಚುಂಬಿಸಿರುವುದು ;
ಮೊಗ್ಗು ಹೂವು ಮರಗಳಿಂದ ಉದುರುತಿರುವುವು ;
ಆಯ್ದು ಆಯ್ದು ನೆಯ್ದು ನೆಯ್ದು ಮನೆಯ ಮರೆಯುವ,
ಹಾಡಿ ಹಾಡಿ ಮಾತನಾಡಿ ಮನವ ಮರೆಯುವ.

ಕೊಕ್ಕುಗಳಲಿ ತೆನೆಯ ತೊಟ್ಟು ಹಾರಿಹೋಗುವ
ಹಸುರುಗಿಳಿಯ ಹಿಂಡುಗಳನು ಅಟ್ಟಿ ನಲಿಯುವ ;
ಎಲ್ಲಿ ನೋಡಲಲ್ಲಿ ಬುವಿಯು ಸರಸದಿಂದಿದೆ,
ಗಿರಿಜೆ, ಬಾರೆ, ಸರಸದಿಂದ ತಿರುಗಿ ನಲಿಯುವ !

ಗಳಗಳೆಂದು ಹರಿವ ತೊರೆಯ ನೀರೊಳಾಡುವ;
ಸೃಷ್ಟಿಯಲ್ಲಿ ಶಿವನ ಸವಿದು ಪೂಜೆಮಾಡುವ !
ಗಿರಿಜೆ, ಬಾರೆ, ವನಗಳಲ್ಲಿ ತಿರುಗಿ ನಲಿಯುವ,
ಒಲಿದ ಎದೆಯ ಮುದ್ದಿಸುತ್ತ ಮತ್ತೆ ಒಲಿಯುವ !

# ಸಾಧನೆ

ಸುಗ್ಗಿಯ ಬಣ್ಣದ ಮೊಗ್ಗಿನ ತೆರದಲಿ,
ತರಳೆ, ನೀನಿರುವೆ;
ಚುಂಬಿಸಲೆಳಸುವ ದುಂಬಿಯ ತೆರದಲಿ,
ಬಾಲೆ, ನಾನಿರುವೆ.
ಹೂವಾದರೆ ನೀ ಬಾಡುವೆ ಬಾಲೆ.
ಮುಗುಳಾಗಿರೆ ನೀನೆನಗದೆ ಲೀಲೆ!

ಮಕರಂದವನೀಂಟುವ ಚಲವಿಲ್ಲ:
ಸೊಬಗನೆ ನೋಡುವೆನು.
ಪಡೆಯುವೆನೆಂಬಾ ಸ್ವಾರ್ಥತೆಯಿಲ್ಲ:
ಸರಸಕೆ ಕಾಡುವೆನು.
ಕನಸಿನ ತೆರದಲಿ ನೀನಿರು ನನಗೆ:
ದೂರದ ದೊರಕದ ಗುರಿ ಸವಿಯೆನಗೆ!

ಸಿದ್ಧಿಯು ಸುಖತರವಾದರು, ನಲ್ಲೆ,
ಕಡಲಿನ ರನ್ನವದು!
ಸಾಧನೆ ಸುಖತಮವೆಂಬುದ ಬಲ್ಲೆ;
ಕೈಲಿಹ ಚಿನ್ನವಿದು!
ಬಾಳಿನ ಹೊಸ ರಸವಣಕಿಪ ನೆಚ್ಚು;
ಬಾಲೆಯೆ, ಬೆಳೆವುದು ಬಳಲಿದ ನಚ್ಚು!

# ನಾ ನಿನ್ನ ಮರೆಯೆ !

ನಾನಳಿದ ಮೇಲೆನ್ನ ಮರೆಯುವೆಯ ನೀನು ?
ನಿನ್ನ ಹೃದಯವು ಪರರ ವಶವಾಗದೇನು ?
ಮರೆತುಬಿಡು, ಮರೆತುಬಿಡು, ನೀ ಮರೆತೊಡೇನು ?
ನಾ ಮರೆಯೆ ! ನಾ ಮರೆಯೆ ! ನಾ ನಿನ್ನ ಮರೆಯೆ !

ಮರೆಯುವೆಯ ನಾ ತೋರಿದೊಲುಮೆಯಾ ಪೆಂಪ ?
ಮರೆಯುವೆಯ ನಾನಿತ್ತ ಚುಂಬನಗಳಿಂಪ ?
ಮರೆತುಬಿಡು, ಮರೆತುಬಿಡು, ನೀ ಮರೆತೊಡೇನು ?
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ !

ಮರೆತುಬಿಡು ಅಂದೆನ್ನ ನೋಡಿದಾ ಪರಿಯ !
ಎನಗಾಗಿ ನೀ ಕರೆದ ಕಂಬನಿಯ ಸರಿಯ !
ಎನ್ನ ಮಂದಸ್ಮಿತವ ನೀ ಮರೆತೊಡೇನು ?
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ !

ಸೆರೆಗೊಳ್ಳುವುದು ನಿನ್ನ ಬೇರೊಂದು ಹೃದಯ ;
ಇನಿಯ, ನಿನಗಾಗುವುದು ಹೊಸ ಹರುಷದುದಯ ;
ಆಗೆನ್ನ ನೆನೆಯದಿರು ; ಮರೆತುಬಿಡು ನೀನು ;
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ !

ಕೋಗಿಲೆಯ ಕೂಗೆನ್ನ ನೆನಪ ತರಬಹುದು,
ಬೀಸುತಿಹ ತಂಬೆಲರು ನೆನಪ ತರಬಹುದು;
ಹೊಸಬಳನು ನೋಡೆನ್ನ ಮರೆತುಬಿಡು ನೀನು ;
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ !

" ನೀನೆನ್ನ ನಿಜ ಜೀವ, ನೀನೆ ನಾ"ನೆಂದೆ!
" ನಿನ್ನನಲ್ಲದೆ ಪರರ ಮೊಗ ನೋಡೆ" ಎಂದೆ!
ಮರೆತುಬಿಡು, ಮರೆ ಬೇಗ ಅದನೆಲ್ಲ, ಇನಿಯ;
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ!

ನಿನಗೆ ಮಂಗಳವಾಗಲಿನಿಯ, ಮರೆ ಎನ್ನ!
ಮುದ್ದಿಡುತ ಹೊಸಬಳನು ನೆನೆಯದಿರು ಎನ್ನ!
ಎನ್ನ ನೆನಪದು ಶೂಲ! ಮರೆತುಬಿಡು ನೀನು!
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ!

# ಆಪ್ತವಾಕ್ಯ

ಇನಿಯನಿಹನು ಎಂಬುವುದನು ಬಲ್ಲೆ ನಾನು, ಹೇ ಸಖಿ.
ನಿನಗೆ ಸಂದೆಯು ಏಕೆ ? ಬಿಡು, ಬಿಡು; ನಂಬು ನನ್ನನು, ಹೇ ಸಖಿ.
ಕನಸಿನೊಡವೆಯು ಒಲಿಯೆ ನಾನು ಮೂಢೆಯಲ್ಲ, ಸೋದರಿ.
ನನ್ನ ಒಲ್ಮೆಗೆ ಗುರಿಯು ಕನಸಿನ ವಸ್ತುವಲ್ಲ, ಸೋದರಿ.
ಮಂಜುವನದಿಂದವನ ಕೊಳಲಿನ ಚೈತ್ರಗಾನವ ಕೇಳಿಹೆ ;
ಮಿಳಿರುವೆಳೆಯ ತಳಿರೊಳವನ ಸಿರಿಯ ಸೆರಗ ನೋಡಿಹೆ.
ನನ್ನ ಸೊಬಗಿದು ಯಾರದೆಲೆ ಸಖಿ ! ನಲ್ಲನಿತ್ತುದೆ, ಹೇ ಸಖಿ.
ನನ್ನ ಕೆನ್ನೆಯೊಳವನ ಮುತ್ತಿನ ಮುದ್ರೆಯಿಹುದು, ಹೇ ಸಖಿ.
ಅವನ ಕಂಡಿಹೆ, ಅವನನುಂಡಿಹೆ, ಅವನನಪ್ಪಿಹೆ, ಸೋದರಿ.
ಅವನ ಕೋಮಲಕಾಯದೊಲ್ಮೆಯ ಸವಿಯ ನೋಡಿಹೆ, ಸೋದರಿ !
ಇನಿಯನಿಹನು ಎಂಬುವುದನು ಬಲ್ಲೆ ನಾನು, ಹೇ ಸಖಿ !
ನಿನಗೆ ಸಂದೆಯು ಏಕೆ? ಬಿಡು, ಬಿಡು; ನಂಬು ನನ್ನನು, ಹೇ ಸಖಿ !

# ರಸಿಕರ್ಷಿ

ರಸಿಕನೆನ್ನಿನಿಯನತಿರಸಿಕನ್, ಕೆಳದಿ,
ಕೂಡಲವನನು ಪೋಪೆ, ಬೇಗ ಸಿಂಗರಿಸು !

ಮನವ ಮೋಹಿಸುವಂತೆ ಬಾಚು ಬೈತಲೆಯ ;
ಮುದ್ದು ಸೂಸುವ ತೆರದಿ ಮುಂಗುರುಳ ತಿದ್ದು ;
ಕುಂಕುಮವನಿನಿದಾಗಿ ನೊಸಲ ಮೇಲಿರಿಸು,
ಕೊರಳಿನಲಿ ಮುಡಿಯಲ್ಲಿ ಹೂವುಗಳ ಮುಡಿಸು !

ತಂಗಾಳಿ ಬೀಸೆ ಹೊಸ ತಳಿರೊಲೆಯುವಂತೆ
ನಿರಿಗೆದೆರೆಗಳ ರಚಿಸು ಮಿಳಿರುವಂತೆ !
ಎದೆಯ ಕೆಣಕುವ ತೆರದಿ ಮೇಲುದನು ಇರಿಸು ;
ಬಿಂಕ ಮೆರೆಯುವ ತೆರದಿ ಕೊಂಕುಗೊಳಿಸು !

ಬಂಡುಣಿಗಳಲರಿನಲಿ ಝೇಂಕರಿಸುವಂತೆ
ನೇವುರದ ಗೆಜ್ಜೆಗಳು ದನಿಗೈಯಲಿ !
ರಸಿಕಮಣಿ ಎನ್ನಿನಿಯ ಬೆರಗಾಗುವಂತೆ
ಸೊಬಗು ಪೆಂಪವನೆದೆಯ ಸೆರೆಗೈಯಲಿ !

# ಅಭಿಸಾರಿಕೆ

ಕಿಂಕರರ ಕಳುಹಿದೆನು ಕರೆತರಲು ರಮಣನನು
ಹೆಣ್ಣು ನಾನೆಂದೆಂಬ ಹೆಮ್ಮೆಯಲಿ ಬೆರೆತು ;
ಹಲವು ದೂತಿಯರಿಹರು, ಹಲವು ಜಾತಿಯರವರು,
ಕೆಲಸ ಮಾಡುವರೆಂದು ಮಲೆತು ಮೈಮರೆತು.

ಯಾರಿಲ್ಲ ನನಗೆಣೆಯು, ಬೇರಿಲ್ಲ ಚೆಲುವಿನಲಿ,
ನನ್ನ ಚೆಲ್ವಿಗೆ ದಾಸ ಚೆನ್ನನೆಂದರಿತೆ ;
ಚರರನೊಬ್ಬೊಬ್ಬರನೆ ದೊರೆಗೆ ಬಳಿಯಟ್ಟಿದೆನು,
ಹೋದವರು ಬರದಿರಲು ಹೊಮ್ಮಿದುದು ಕೊರತೆ.

ಮೊದಲಿಗಳು ಬನದಲ್ಲಿ ಮಾಮರವ ಕಂಡೊಡನೆ
ಹಣ್ಣುಗಳನುಣತೊಡಗಿ ಹೆಜ್ಜೆಯಿಡಲಿಲ್ಲ !
ರಸಿಕೆ ಎರಡನೆ ಕೆಳದಿ, ರಮ್ಯೆಯೆ ಕೋಗಿಲೆಯು
ಮುದದುಲಿಯನಾಲಿಸುತ ಮುಂಬರಿಯಲಿಲ್ಲ !

ಮೂರನೆಯು ಕಬ್ಬಿಗಿತಿ ಮೋಹಿಸುವ ಬನದಳಿರ
ಲಾವಣ್ಯದೈಸಿರಿಯಲೋಲಾಡಿಯಾಡಿ,
ನಾಲ್ಕನೆಯ ಭಾವುಕಿಯು ಸಿಲ್ಕಿ ಪೂಗಂಪಿನಲಿ
ತೊರೆದು ಕೈಗಜ್ಜವನು ತೊಳಲಿದಳು ಹಾಡಿ !

ತರಳೆಯೈದನೆಯವಳು ತಂಬೆಲರ ಸೋಂಕಿಂಗೆ
ತನುವುಬ್ಬಿ ತಲ್ಲಣಿಸಿದಳು ನನ್ನ ಜರೆದು ;
ಜಾಣೆಯಾರನೆಯವಳು ರಾಣನರಮನೆಯೈದಿ
ಕೋಣೆಗಳ ಗುಣಿಸಿದಳು ಆಣತಿಯ ತೊರೆದು !

ಹೋದವರು ಬರದಿರಲು, ಕಾದು ಬಳಲಿದ ನಾನು
ಸಿಟ್ಟಿದ್ದು ಸಡಗರದಿ ಸಿಡುಕಿದೆನು ಒಮ್ಮೆ!
ರಂಜಿಸಿನ ಮುಳುಗುತಿರೆ, ಸಂಜೆಗೆಂಪೆಸೆಯುತಿರೆ,
ಹಿಂಜರಿದು ದೈನ್ಯದಲಿ ಅಂಜಿದುದು ಹೆಮ್ಮೆ!

ಅರಸಿ ಎಂಬುವ ಬಿಂಕ ವಿರಹದಲಿ ಲಯವಾಗೆ
ಅರಸನಭಿಸಾರಿಕೆಯು ಹೊರಟೆನರಮನೆಗೆ!
ಮರಳಿ ಕೆಳದಿಯರೆಲ್ಲ ಅರೆದಾರಿಯಲಿ ಬಂದು
ಜೀಡಿದರು ಮನ್ನಣೆಯ, ಬಾಗಿದರು ನನಗೆ!

ರಾಣಿ ಬಂದುದ ಕಂಡು ರಾಣನಾಡಿದನಿಂತು
" ಕಳುಹಿಸದೆ ಕಿಂಕರರ ನೀ ಬಂದುದೇಕೆ? "
ನಲ್ಲನಾಡಿದ ನುಡಿಗೆ ನಾಚಿಯೊರೆದೆನು ಬಾಗಿ :
" ದಾರಿಯೆಡೆ ಉಪವನವದಾರಿಗಿಹುದೇಕೆ? "

# ನಾಚೆ ನಾನಿನ್ನು

ಮನೆಗಿನಿಯನೈತರಲು ಮೊಗದೋರೆ ನಾಚಿದೆನು ;
ಕೆಳದಿಯರು ನಾಚದೆಯೆ ಸುಳಿದರವನೆದುರು !
ಚೆಲುವಿನಲಿ ಕೆಳದಿಯರ ಮೀರಿ ನಾನಿರ್ದರೂ
ನನ್ನ ಸೊಬಗನು ರಮಣನರಿಯಲಿಲ್ಲಾ, ಹಾ !

ಸಖಿಯರೊಯ್ಯಾರದಲಿ ನಿರಿಯ ಚಿಮ್ಮುತ ಬಂದು
ನೋಟದಲಿ ಬೇಟವನು ಸೂಚಿಸಿದರು ;
ಹೂವುಗಳ ಕೊಯ್ದಾಯ್ದು, ಕೋದು, ಹಾರವ ನೆಯ್ದು,
ನೂಪುರವ ದನಿಗೈದು ನಲಿದರಲ್ಲಿ !

ಇನಿಯನವರನಿಬರನು ಒಲಿದು ಬಂದಪ್ಪಿದನು ;
ನನಗಪ್ಪುವಭಿಲಾಷೆ ! ನಾಚಿಕೆಯು ಬಿಡದು !
ನಾಚಿಕೆಯನುಳಿದವರು ಸುಖವನನುಭವಿಸಿಹರು !
ನಾಚಿ ಕೆಟ್ಟೆನು ನಾನು ! ನಾಚೆ ನಾನಿನ್ನು !

# ನಿನ್ನೆಡೆಗೆ ಬರುವಾಗ

ನಿನ್ನೆಡೆಗೆ ಬರುವಾಗ ಸಿಂಗರದ ಹೊರೆಯೇಕೆ?
ಸಡಗರದ ಮಾತುಗಳ ಬಿಂಕವೇಕೆ?
ನಿನ್ನ ಮುಂದಿರುವಾಗ ಮಂತ್ರಗಳ ಮರೆಯೇಕೆ?
ಸಂಪ್ರದಾಯದ ಮರುಳು ಲಜ್ಜೆಯೇಕೆ?

ನೇವುರದ ಗೆಜ್ಜೆಗಳ ಕಿಂಕಿಣಿಯ ದನಿ ನಿನ್ನ
ಸವಿಗೊರಲಿನಿಂಚರವ ಕೆಡಿಸದಿರಲಿ!
ಮಂತ್ರಗಳ ಜವನಿಕೆಯು, ದೊರೆ, ನಿನ್ನ ಸಿರಿಮೆಯ್ಯ
ಸೌಂದರ್ಯವನು ಮುಚ್ಚುಗೈಯದಿರಲಿ!

ನಗ್ನತೆಗೆ ನಾಚದಲೆ ಸಿರಿದಳಿರ ತೆಕ್ಕೆಯಿಂ
ಮೂಡಿ ಸುಗ್ಗಿಯನೊಲಿವ ಹೂವಿನಂತೆ
ಸಿಂಗರದ ಹೊರೆಯುಳಿದು, ಮಂತ್ರಗಳ ಮರೆಯುಳಿದು
ಪ್ರೇಮದಾರತಿ ಹಿಡಿದು ತೇಲಿಬರುವೆ!

# ತರಳೆ ನಾನು; ದೊರೆಯೆ ನೀನು

ತರಳೆ ನಾನು ; ದೊರೆಯೆ ನೀನು
ಬಾರ ತರಳನಂದದಿ ;
ಚೆಲುವೆ ನಾನು ; ಇನಿಯ ನೀನು
ತೋರ ಚೆಲುವನಂದದಿ.
ತಿರುಪೆ ಬೇಡಿ ತಿಂಬೆ ನಾನು ;
ಗುಡಿಸಲಲ್ಲಿ ಬಾಳ್ವೆ ನಾನು ;
ಗೋಪಳಾನು ; ಹರಿಯೆ, ನೀನು
ಬಾರ ಗೋಪನಂದದಿ !
ಬಗೆಯ ಚಿಂತೆ ಬಯಸಿದಂತೆ,
ತೋರ, ಬಾರ ಚಂದದಿ !

# ಎನ್ನಿನಿಯಳು

ಬನವೆಲ್ಲ ಕೊನರೊಡೆದು ತಳಿರಿಂದ ನಳನಳಿಸೆ
ಅರಳುತಿಹ ಬಿರಿಮುಗುಳ ನೋಡಿರುವೆಯೇನು ?
ಬಾನೆಲ್ಲ ತಿಳಿಯಾಗಿ ಮುಗಿಲ ಸುಳಿವಿಲ್ಲದಿರೆ
ಮೂಡುತಿಹ ತಾರೆಯನು ಕಂಡಿರುವೆಯೇನು ?
ಮೂಡುತಿರೆ ನೇಸರೆಳಬೆಳಕಿನಲಿ ಮಿಂಚುತಿಹ
ತಾವರೆಯ ಹಿಮಮಣಿಯ ದಿಟ್ಟಿಸಿಹೆಯೇನು ?
ಇನಿತೆಲ್ಲವನು ನೀನು ಕಂಡಿರುವೆಯಾದೊಡೆಯು
ನೋಡಬೇಕೆನ್ನಿನಿಯಳಿಳನಗೆಯ ನೀನು !

# ನನಗಾಗಿ

ಕೊಂಕಿಸಿ ಕೊರಲನು ಬಿಂಕದಿ ಬಳುಕುತ
ನಾಣನು ನಟಿಸುತ ಹೂಕೊಯ್ದು,
ಮುದ್ದು ಚೆಲುವುಗಳ ಮುದ್ದೆಯ ತೆರದಲಿ
ಬಂದಳು ಮದನನ ನನೆಗೈದು !
ಹೂವೇ ಹೂಗಳ ಕೊಯ್ವಂತೆ,
ಮಾಲೆಯೆ ಮಾಲೆಯ ನೆಯ್ವಂತೆ,
ಚೆಲ್ವನು ಚೆಲ್ವೇ ಗೆಲ್ವಂತೆ,
ಮೆರೆದಳು ಆ ಕಾಂತೆ !

ಬಳ್ಳಿಯ ಬಳಿಯಲಿ ನನ್ನೆದೆಯಾಸೆಯು
ಬೇಟವೆ ಬಾಲೆಯ ರೂಪಾಗಿ,
ಮೋಹಿಸುವಂದದಿ ಸುಮಸಮ ಕೋಮಲೆ
ಕಣ್ಗೆಸೆದಳು ಸವಿಗನಸಾಗಿ !
ಲತೆಗಳ ಬಳಿಯಲಿ ಲತೆಯಾಗಿ,
ಸುಮಗಳ ಸಂಗದಿ ಸುಮವಾಗಿ,
ನಿಂತಳು ಚೆಲುವೆಯು ತಲೆಬಾಗಿ,
ನಿಂತಳು ನನಗಾಗಿ.

# ಆಸೆ !

ಸೊಬಗಿನ ಸೆರೆಮನೆಯಾಗಿಹೆ ನೀನು ;
ಚೆಲುವೇ, ಸರಸತಿಯೆ !
ಅದರಲಿ ಸಿಲುಕಿದ ಸೆರೆಯಾಳಾನು ;
ನನ್ನೆದೆಯಾರತಿಯೆ !

ನಿನ್ನೆಳೆಮೊಗದಲಿ ನಸುನಗೆಯಾಗಿರೆ
ನನಗಿಹುದೊಂದಾಸೆ !
ನಿನ್ನಾ ಮುಡಿಯಲಿ ಹೂವಾಗಿರುವುದು
ನನಗಿನ್ನೊಂದಾಸೆ !

ತಾವರೆ ಬಣ್ಣದ ನಿನ್ನಾ ಹಣೆಯಲಿ
ಕುಂಕುಮವಾಗಿರಲೆನಗಾಸೆ !
ಬಳ್ಳಿಯನೇಳಿಪ ನಿನ್ನಾ ಕೈಯಲಿ
ಹೊಂಬಳೆಯಾಗಿರಲೆನಗಾಸೆ !

ಪದ್ಮವ ಮುಸುಕಿದ ಶೈವಲದಂತಿಹ
ಸೀರೆಯ ನಿರಿಯಾಗಿರುವಾಸೆ !
ಮನವನು ಸೆಳೆಯುವ ನಿನ್ನಸಿನಡುವಿಗೆ
ಕಟಿಬಂಧನವಾಗಿರುವಾಸೆ !

ನಿನ್ನಾ ಕೈಯಲಿ ಗಾನವ ಸೂಸುವ
ವೀಣೆಯು ನಾನಾಗುವುದಾಸೆ !
ನಿನ್ನೊಳು ನಾನೂ, ನನ್ನೊಳು ನೀನೂ
ಪ್ರೇಮದಿ ಲಯವಾಗುವುದಾಸೆ !

ಚೆಲುವೇ, ತರಳೇ, ಮುದ್ದಿನ ಹೆಣ್ಣೆ,
ನಿನ್ನವ ನಾನಾಗಿರುವಾಸೆ!
ಇನ್ನೇನುಸುರಲಿ? ಕಾಮನ ಕಣ್ಣೆ,
ನನಗಿಹುದೇನೇನೋ ಆಸೆ!

# ಸೌಂದರ್ಯಯೋಗಿ

ನಿಲ್ಲು ನಿಲ್ಲೆಲೆ ಹೆಣ್ಣೆ,
ನಿಲ್ಲು ಚೆಲ್ವಿನ ಕಣ್ಣೆ,
ನಿನ್ನ ಸೊಬಗನು ನೋಡಿ
  ಕೈಬಿಡುವೆನು!
ಬಗೆ ತಣಿಯೆ ಹೀರಾಡಿ
  ಕೈಬಿಡುವೆನು!

ರವಿಯುದಯದಂತಿರುವೆ
ನೀನೆನಗೆ, ಎಲೆ ಚೆಲುವೆ!
ಅದಕಿಂತ ಕೀಳಲ್ಲ
  ನೀನು ನನಗೆ!
ಅದಕಿಂತ ಮೇಲಲ್ಲ
  ನೀನು ನನಗೆ!

ಸೌಂದರ್ಯ ಯೋಗಿಯಾ,
ಎಲೆ ಸುಂದರಿಯೆ, ನಾನು!
ನೀನು ಬರಿ ರವಿಯುದಯ!
  ಸೊಬಗು ನನಗೆ!
ಸೊಬಗಿರುವ ತಾವೆಲ್ಲ
  ಗುಡಿಯು ನನಗೆ!

# ಕೀಲಿಕೈ ಎಲ್ಲಿಹುದು?

ಕೀಲಿಕೈ ಎಲ್ಲಿಹುದು ಬಾಗಿಲನು ತೆರೆಯೆ?
ಓ ದ್ವಾರಪಾಲಕನೆ, ಎಲ್ಲಿ ಹೋಗಿರುವೆ?

ದೂರದಿಂ ಬಂದಿಹೆನು; ಬಲು ಬಳಲಿ ನೊಂದಿಹೆನು,
ಕತ್ತಲಲಿ ಸೋತಿಹೆನು ದಾರಿ ನಡೆದು!
ಮುಳ್ಳುಕಲ್ಲನು ತುಳಿದು, ಹಳ್ಳಕೊಳ್ಳವ ಕಳೆದು,
ತುಂಬಿ ಹರಿಯುವ ಹೊಳೆಯ ಹಾದುಬಂದೆ!

ಮುಂಗಾರುಮಳೆಗರೆದು ಚಳಿಯು ತಣ್ಣೇರುತಿದೆ;
ಮೈಗಂಟಿಕೊಂಡಿರುವುದುಟ್ಟ ಸೀರೆ!
ಕೇಶಪಾಶವು ತೊಯ್ದು ಮುಡಿಗೆದರಿಕೊಂಡಿಹುದು!
ಕಂಪಿಪುದು ಕೋಮಲೆಯ ಕುಸುಮ ಕಾಯ!

ಬಿರುಗಾಳಿ ಬೀಸುತಿದೆ; ಕುಡಿಮಿಂಚು ತಳಿಸುತಿದೆ;
ಸಿಡಿಲೆರಗಿ ಬಾನೆಲ್ಲ ಕೆರಳಿರುವುದು!
ಹೊರಗೆಲ್ಲಿಯೂ ಮಲಗೆ ಬೆಚ್ಚನೆಯ ತಾವಿಲ್ಲ;
ತಿಮಿರ ಭಯ ಹೃದಯದೊಳು ಹರಿಯುತಿಹುದು!

ಮಲಗಿರುವನೆನ್ನಿನಿಯನೊಳಗೆ ಬಿಸುಸೆಜ್ಜೆಯಲಿ;
ಕರೆದರೂ ಕೇಳಿಸದು! ಗುಡುಗುತಿಹುದು!
ಚಳಿಯಿಂದ ಪಾರಾಗುವೆನು ರಮಣನೆಡೆ ಸೇರಿ!
ತೊಯ್ದುಡುಪಿಗಿಂತ ನಗ್ನತೆಯೆ ಲೇಸು!

ಕತ್ತಲಲಿ ಬಂದಿರುವೆ; ತಾಯ್ಮನೆಯನಗಲಿರುವೆ;
ತೊಯ್ದು ಮಳೆಯಲಿ ಕದವ ತಟ್ಟುತಿರುವೆ!
ಬಾಗಿಲನು ಕಾಯದೆಯೆ ನೀನೆಲ್ಲಿ ಹೋಗಿರುವೆ?
ಓ ದ್ವಾರಪಾಲಕನೆ, ಬೇಗ ಬಾರೈ.

# ಕುಣಿಯುವಂತೆ ಮತ್ತಶಿಖಿ

ಕುಣಿಯುವಂತೆ ಮತ್ತಶಿಖಿ
ಕುಣಿಯುತಿಹನು ನೋಡೆ, ಸಖಿ;
ನೋಡೆ ಸಖಿ, ಬಾರೆ ಸಖಿ,
ನೋಡೆ ಶಶಿಮುಖಿ.

ಮಳೆಯ ಹಸಿಯು ತಳಿರಮೇಲೆ
ಮೆಲ್ಲನಡಿಯನಿಡುತ ಬೀಳೆ
ಹಸುರಿನಿಂದ ಮೆರೆಯುಲಿಳೆ
ನಳನಳಿಸೆ ಬೆಳೆ;

ಮುಗಿಲ ಮುಡಿದು ಮೈಯಲಿ,
ಕೊಳಲ ಹಿಡಿದು ಕೈಯಲಿ,
ಮಲರಗಣ್ಣ ಮುಗುಳುನಗೆ
ಜಗದ ಬಗೆವುಗೆ,

ಉಲಿಯನುಳಿದು ಖಗಗಳು
ಮೇವ ತೊರೆದು ಮಿಗಗಳು
ಕೊಳಲ ಕೇಳಿ, ಮುದವ ತಾಳಿ
ಮೈಯ ಮರೆತಿವೆ.

ನೇಸರಿಂದು ಬಾನು ತಿರೆ
ಕುಣಿವುವವನು ಕುಣಿಯುತಿರೆ;
ಬನಗಳಿಹವು ತಳಿರ ಚೆಲ್ಲಿ
ಮೂಕ ಸುಖದಲಿ!

ಸಾಮವೇದ ನಮೋ ಎನೆ
ಕೊಳಲ ನುಡಿವನು ;
ಭರತಶಾಸ್ತ್ರ ನಮೋ ಎನೆ
ಅಡಿಯನಿಡುವನು !

# ಪೂವಮ್ಮ

(ಕೊಡಗಿನ ಹುಡುಗಿ)

ಮಡಿಕೇರಿಯ ಸಿರಿಮಲೆಗಳ ಮೇಲೆ
ಬಾಲ ದಿನೇಶನ ಕೋಮಲ ಲೀಲೆ
ಹಸುರಿನ ಕೆನ್ನೆಗೆ ಹೊನ್ನಿನ ಮುತ್ತು
ಕೊಡುತಿತ್ತು.
ಜನವಿಲ್ಲದ ಕಿರುದಾರಿಯೊಳಾನು
ಮೆಲ್ಲನೆ ನಡೆದಿರೆ ಪರ್ವತಸಾನು
ಅಲೆಯಲೆಯಲಿ ಮುಗಿಲಿಗೆ ಏರಿತ್ತು ;
ಮೀರಿತ್ತು !

ಸುತ್ತಲು ಕಾಡಿನ ಹೂಗಳು ಕಣ್ಣಿಗೆ
ನಲಿನಲಿದುವು ಹೂಬಿಸಿಲಲಿ ನುಣ್ಣಗೆ,
ಖಗಗಾನವು ಮೌನವ ಕಡೆದಿತ್ತು ;
ಮಿಡಿದಿತ್ತು.
ತಪ್ಪಲ ಮೇಯುವ ಮಂಜಿನ ಮಂದೆ
ತೇಲುತಲಿದ್ದುದು ಹಿಂದೆ ಮುಂದೆ.
ನಡೆದೆನು ಕೊಡಗಿಗೆ ನಾ ಮನಸೋತು ;
ಮೇಣೋತು.

ನಡೆದಿರೆ ದಾರಿಯ ತಿರುಗಣೆಯಲ್ಲಿ
ಪರ್ವತ ಕಾನನ ಕಂದರದಲ್ಲಿ
ಫಕ್ಕನೆ ಕಂಡಿತು ನನ್ನಯ ಕಣ್ಣು :
ಮುದ್ದಿನ ಮಲೆಹೆಣ್ಣು !
ಹೆಣ್ಣೆಂಬೆನೆ ? ಅಲ್ಲಾ ! ಕಿರುಹುಡುಗಿ
ಕೊಡಗಿಗೆ ಕನ್ನಡಿಯೋ ಎನೆ ಬೆಡಗಿ !
ಐದು ವಸಂತಗಳಂದದ ಕೊಡಗಿ !
ಹೊಸ ಹೂ ಆ ಹುಡುಗಿ !

ಬೆಡಗಿನ ಕೊಡಗಿನ ಮಲೆಯಿಂದೊಯ್ಯನೆ
ಕಿರುದೊರೆಯುರುಳುವ ತೆರದಲಿ ರಯ್ಯನೆ
ಕಲ್ಲು ಹಾದಿಯಲಿ ಬಂದಳು ಚಿಮ್ಮಿ
   ಮಿಗವರಿಯೊಲು ಹೊಮ್ಮಿ!
ನಿಂತಳು ಬೆರಗಾಗೆನ್ನನು ಕಂಡು!
ಅಂತು ನಿಲ್ಲುವುದು ದುಂಬಿಗೆ ಬಂಡು!
ಕಣ್ಣೊಳೆ ನಾನಾ ಚೆಲುವನು ಹೀರಿ
   ನಿಂತೆನು ಎದೆಹಾರಿ!

ತುಂಬಿದ ಮೊಗ, ಮೈ; ತುಳುಕುವ ಕಣ್ಣು;
ಕೆನ್ನೆಗಳೆರಡೂ ಕಿತ್ತಿಳೆ ಹಣ್ಣು!
ಕೊಡಗಿಗೆ ಕನ್ನಡಿ ನಿನ್ನಯ ಕೆನ್ನೆ
   ದಿಟವೈಸಲೆ ಚೆನ್ನೆ!
ಒಲ್ಮೆಯು ನಲ್ಮೆಯು ಚೆಲುವೂ ಬೆಡಗೂ
ನಿನ್ನಲ್ಲಿವೆ; ಇವೆ ಎಲ್ಲಾ ಕೊಡಗೂ!
ಗಿರಿ ತಲೆಕಾವೇರಿಗಳಿನ್ನೇಕೆ?
   ನೀನಿರೆ ಅವು ಬೇಕೆ?

ಮಲೆಗಳ ನೆತ್ತಿಲಿ ಕವಲೊಡೆದಂದದಿ
ಜಡೆ ಕಂಗೊಳಿಸಿತ್ತೆರಡಾಗಂದದಿ.
ಕೇಳಿದೆನಾಕೆಯ "ಹೆಸರೇನಮ್ಮಾ?"
      ನುಡಿದಳು "ಪೂವಮ್ಮ!"
ನುಡಿಸುವ ಹುಚ್ಚಿಗೆ ಹೆಸರನು ಕೇಳಿದೆ;
ಆಲಿಸಿ ಪರಮಾಹ್ಲಾದವ ತಾಳಿದೆ.
ನನಿಯೂ ಹೆಸರೂ ಎರಡೂ ಹೂವೆ!
      ಅವಳಂತೂ ಹೂವೆ!

ಕೊಡಗದು ಹಿರಿಮಲೆಗಳ ಸಿರಿನಾಡು ;
ಮೇಲಾಕಾಶವು, ಕೆಳಗಡೆ ಕಾಡು !
ಅಂತೆಯೆ ಇರುವುದು ನನ್ನಾ ಬೀಡು,
ನಚ್ಚಿನ ಮಲೆನಾಡು !
ಮಲೆನಾಡೆನಗಿದೆ ಹತ್ತಿರದಲ್ಲೆ,
ಅದರಿಂ ಕೊಡಗನು ಮರೆಯಲು ಬಲ್ಲೆ !
ಆದರೆ ಮರೆಯೆನು ನಿನಗಾಗಮ್ಮಾ
ಮುದ್ದಿನ ಪೂವಮ್ಮಾ !

# ಚೆಂದುಟಿ ಮುತ್ತು

(ಬ್ರೌನಿಂಗ್ ಕವಿಯ ಒಂದು ಕವನ ಭಾಗದ ಅನುಕರಣೆ)

ಸುಗ್ಗಿಯ ಬಣ್ಣದ ಸವಿಗನಸೆಲ್ಲಾ
ಇಹುದೊಂದೇ
ತುಂಬಿಯ ತುತ್ತಿನ ಚೀಲದಲಿ.
ಗಣಿವಸಿರಿನ ಹೊಳೆವೈಸಿರಿಯೆಲ್ಲಾ
ಇಹುದೊಂದೇ
ರನ್ನದ ಕಿರುನಗೆಯಾಳದಲಿ.
ಕಡಲೊಳಗಡಗಿಹ ಸಂಪತ್ತೆಲ್ಲಾ
ಹೊಳೆಯುವುದೊಂದೇ ಮುತ್ತಿನಲಿ ;
ಇಲ್ಲಿಯ ಅಲ್ಲಿಯ ಸಿರಿಸೊಬಗೆಲ್ಲಾ—
—ನನ್ನಿಗೆ ನನ್ನಿ ;—
ಹುದುಗಿದೆ ನನ್ನೀ
ಗೌರಿಯ ಚೆಂದುಟಿ ಮುತ್ತಿನಲಿ ;
ಒಂದೇ ಮುತ್ತಿನಲಿ !

# ಷೋಡಶಿ

ಷೋಡಶ ವಸಂತಗಳು ಸುಯ್ದಾನವಂ ಮಾಡಿ
ಕರುವಿಟ್ಟ ಲಾವಣ್ಯ ಲಕ್ಷ್ಮಿಯೆನೆ, ಸುಂದರಿಯೆ,
ಕಂಗೊಳಿಪೆ. ಜೀವನದ ಮಧುಕುಂಜ ಮಂಜರಿಯೆ,
ಕೂರ್ಮೆ ತೆಂಗಾಳಿಯಲಿ ನಲಿವ ನಿನ್ನನು ನೋಡಿ
ಹೃದಯದ ನಿರಾಕಾರ ಸ್ವಪ್ನಗಳು ಮೈಮೂಡಿ
ನುಡಿದೋರುತಿವೆ.—ಅವುಗಳರ್ಥವೇನೆಂದರಿಯೆ.
ಉದಯಗಿರಿ ಫಣೆಯಲ್ಲಿ ಪೂರ್ಣ ಚಂದ್ರನು ಮೆರೆಯೆ
ಯಾಮಿನಿಯು ಬಣ್ಣಬಣ್ಣದ ಮುಗಿಲ್ಗಳನು ಸೂಡಿ
ಕರೆವಂತೆ ಮೋಹಿಸಿಹೆ, ಓ ನನ್ನ ಸವಿಗಣಸೆ!
ನನಸಲ್ಲ!—ಹೇ ಸ್ವಪ್ನಸುಂದರಿಯೆ, ನೀನಂದು
ಮರ್ತ್ಯವನ್ನುಳಿದು ಹಾ! ಸ್ವರ್ಗವಾದವಳಿಂದು
ಕನಸಿನಲಿ ಚುಂಬಿಸಿಹೆ!—ಅಯ್ಯೋ, ಕನಸು ಕನಸೆ?—
ಆದರಿದೊ, ಹಾಡುತಿದೆ ದಿನಮುಖದ ಕಾಜಾಣ:
ಬೆಂದೆದೆಗೆ ವಿಸ್ಮೃತಿಯ ಗಾಯನ ಸುರಾಪಾನ!

# ರಸಋಷಿ

೧

ಬಾ ಕವಿತೆ, ಬಾ ಕೆಳದಿ,
ಬಾ ನನ್ನ ತರಳೆ,
ಬಾ ಚೆಲುವೆ, ಚಂಚಲೆಯೆ,
ಮಿಂಚುಗಣ್ಣೆರಳೆ!
ದಟ್ಟಬನಗಳ ಮಲೆಯ
ನಡುನೆತ್ತಿಯಲ್ಲಿ,
ತಣ್ಣೆಳಲ ತಣ್ಣೆಲರ
ಮಲೆನಾಡಿನಲ್ಲಿ,
ಸಿರಿವಳಿರ ಪೊದರುಗಳ
ಬನಗತ್ತಲಲ್ಲಿ,
ಸದ್ದಿಲ್ಲದಡವಿಯಲಿ,
ಬೇರೊಂದು ಪೊಡವಿಯಲಿ,
ಮೈ ಮರೆತು ನಲಿಯುವಂ,
ಎದೆ ಮುಟ್ಟಿಯೊಲಿಯುವಂ
ಏಕಾಂತದಲ್ಲಿ!
ಬಾ ಚೆಲ್ವೆ, ಬಾ ರಮಣಿ,
ಸವಿಗೊರಲಹೆಣ್ಣೆ;
ಬಾ ಸೀರೆ, ಬಾ ಕವಿತೆ,
ಕಬ್ಬಿಗನ ಕಣ್ಣೆ!
ಸೌಂದರ್ಯವಿಹುದಿಲ್ಲಿ
ಸ್ವಾತಂತ್ರ್ಯವಿಹುದಿಲ್ಲಿ,
ಏಕಾಂತವಿಹುದಿಲ್ಲಿ,
ಸಂಗೀತವಿಹುದಿಲ್ಲಿ,
ಮಲೆನಾಡಿನಲ್ಲಿ!

ಪದ್ಧತಿಯು ಹೊರೆಯಿಲ್ಲ,
ಕಾಯಿದೆಯ ಕಟ್ಟಿಲ್ಲ,
ಶಾಸ್ತ್ರಗಳ ವಿಧಿಯಿಲ್ಲ,
ಕರುಬುವರ ಕಣ್ಣಿಲ್ಲ,
ಬನ ಬೆಟ್ಟದಲ್ಲಿ!
ಇಲ್ಲಿ ಪ್ರೇಮವೆ ನೀತಿ,
ಇಲ್ಲಿ ಧರ್ಮವೆ ಪ್ರೀತಿ,
ಇಲ್ಲಿಯೊಲ್ಮೆಯೆ ಕಟ್ಟು,
ಇಲ್ಲಿ ಬೇಟವೆ ಗುಟ್ಟು,
ಮಾಡಿದುದೆ ಮಾಟ!
ಇಲ್ಲಿ ಕೇಳುವರಿಲ್ಲ,
ಆಡಿದುದೆ ಆಟ!

೨

ಬಾ ಕವಿತೆ, ಬಾ ತರಳೆ,
ಬಾ ನನ್ನ ಚೆಲುವೆ;
ನೀನೆನ್ನ ಬಾಳುಸಿರು,
ಬಾ ನನ್ನ ಒಲವೆ!
ಇಲ್ಲಿ ಬದುಕೇ ಹುಚ್ಚು;
ಇಲ್ಲಿ ಎಲ್ಲವು ಹುಚ್ಚು;
ಮರಕೆ ಹೂವಿನ ಹುಚ್ಚು,
ಬನಕೆ ಹಸುರಿನ ಹುಚ್ಚು;
ಖಗಕೆ ಹಾಡಿನ ಹುಚ್ಚು;
ಮಿಗಕೆ ಕಾಡಿನ ಹುಚ್ಚು;
ಒಂದಕೆರಡರ ಹುಚ್ಚು;
ಎರಡಕೊಂದರ ಹುಚ್ಚು:
ನನಗೆ ನಿನ್ನಯ ಹುಚ್ಚು;

ನಿನಗೆ ನನ್ನಯ ಹುಚ್ಚು ;
ಹುಚ್ಚು, ಬರಿ ಹುಚ್ಚು !
ಇಲ್ಲಿ ಸೂರ್ಯೋದಯವು
ದಿವ್ಯಾವತರಣ !
ಇಲ್ಲಿ ಚಂದ್ರೋದಯವು
ಪ್ರಕೃತಿಯಾಭರಣ !
ಮಾತಾಡಿದರೆ ಕಬ್ಬ !
ನೋಡಿದರೆ ಹಬ್ಬ !

೩

ಕವಿಯ ಹುಚ್ಚಿನ ಸವಿಯ
ನೀ ಬಲ್ಲೆಯೇನು ?
ನಿನಗಿನಿತು ನೀಡುವೆನು
ಬಾ ಇಲ್ಲಿ ನೀನು !
ಕೊಬ್ಬಿ ನಳನಳಿಸುತಿಹ
ಬನದಳಿರ ಮೇಲೆ
ಹಬ್ಬಿ ತಳತಳಿಸುತಿಹ
ಎಳಬಿಸಿಲು ಬೀಳೆ
ನಾವಿಬ್ಬರೂ ಸೇರಿ
ಗುಡ್ಡ ಬೆಟ್ಟವನೇರಿ
ಕೈಮುಗಿದು ದೇವನಿಗೆ
ಬಿನ್ನಹವ ಮಾಡಿ,
ತಿರುಗಿ ನಲಿದಾಡುವಂ
ನಲ್ಮೆಯಲಿ ಕೂಡಿ.
ಬಲ್ಲಿದರ ಬಗೆಯಿಂದ
ನಾ ಸುಲಿದು ತಂದಿರುವ
ಅರಿವಿನಾ ಸೂರೆಯನು
ನಿನ್ನೆಡೆಗೆ ಚೆಲ್ಲಿ

ಸ್ವರ್ಗ ಮರ್ತ್ಯಂಗಳನು
ವಿಶ್ವಬ್ರಹ್ಮಾಂಡವನು
ನಿನಗೀವೆನಿಲ್ಲಿ!
ಯೋಗಿಗಳ ಯೋಗವನು.
ಭೋಗಿಗಳ ಭೋಗವನು,
ಜ್ಞಾನಿಗಳ ಜ್ಞಾನವನು,
ಭಕ್ತರಾ ಭಕ್ತಿಯನು
ನಿನಗೀವೆನಿಲ್ಲಿ!
ಎಲ್ಲವಿದೆ ರಸಋಷಿಯು
ಕೈಬುಟ್ಟಿಯಲ್ಲಿ!

೪

ಯಾವ ಮತದವನಲ್ಲ,
ಎಲ್ಲ ಮತದವನು;
ಯಾವ ಪಂಥವು ಇಲ್ಲ
ಬಹು ಪಂಥದವನು.
ಎಲ್ಲ ಬಿಡುವವನಲ್ಲ,
ಎಲ್ಲ ಹಿಡಿವವನಲ್ಲ.
ನಾನು ಉಮ್ಮರನಲ್ಲ,
ಚಾರ್ವಾಕನೂ ಅಲ್ಲ.
ನೀತಿಜಡನೂ ಅಲ್ಲ,
ನೀತಿಗೇಡಿಯು ಅಲ್ಲ.
ಬರಿ ಕನಸಿನವನಲ್ಲ,
ಬರಿ ಕೆಲಸದವನಲ್ಲ!
ಎಲ್ಲ ಬಿಡಲೂ ಬಲ್ಲೆ,
ಎಲ್ಲ ಹಿಡಿಯಲು ಬಲ್ಲೆ,
ಕೇಳೆನ್ನ ನಲ್ಲೆ!

ನನ್ನೊಡನೆ ನೀನಿರಲು
ವೈರಾಗ್ಯವಲ್ಲೆ !
ನಾವು ಕೊಲುವುದು ಬೇಡ,
ನಾವು ಕಳುವುದು ಬೇಡ,
ಸುಳ್ಳಾಡುವುದು ಬೇಡ,
ಅನ್ಯಾಯವೂ ಬೇಡ ;
ಆದರೊಲಿವುದು ನಮ್ಮ
ಒಡನೆ ಹುಟ್ಟಿದ ದಮ್ಮ !
ನರಕ ಚುಂಬನದೊಳಿರೆ
ನರಕವೆಮಗಿರಲಿ !
ಬೇಟದಲಿ ಪಾಪವಿರೆ
ಪಾಪವೆಮಗಿರಲಿ !
ಹರಿಯ ಮರೆವುದು ಬೇಡ,
ತಿರೆಯ ಜರೆವುದು ಬೇಡ ;
ಇರುವ ಬಾಳಿನ ಸೊದೆಯ
ಭಕ್ತಿಯಲಿ ಹೀರಿ,
ಬರುವ ಬದುಕಿನ ಸೊದೆಯ
ಧ್ಯಾನದಲಿ ಸೇರಿ,
ಇದನು ಹುಳಿಸದ ತೆರದಿ
ಅದನು ಹಳಿಸದ ತೆರದಿ,
ಎರಡು ಮುಳಿಯದ ತೆರದಿ
ಜೀವನವ ಹೊತ್ತು
ನಡೆಯುವಂ ಶಾಂತಿಯಲಿ
ತೆರುವುದನು ತೆತ್ತು !

೫

ಕೆಲರಿಳೆಯ ಬಿಟ್ಟವರು,
ದೊಡ್ಡವರು ಅವರು !

ಕೆಲರೆದೆಯ ಸುಟ್ಟವರು,
  ದೊಡ್ಡವರು ಅವರು!
ಅವರಿಗವರದೆ ಹಾದಿ,
ನಮಗೆ ನಮ್ಮದೆ ಹಾದಿ!
ಬಾ ಚೆಲುವೆ, ಬಾ ಕವಿತೆ,
  ಬಾ ನನ್ನ ಹೆಣ್ಣೆ;
ಬಾ ಬಳಿಗೆ, ಬಾ ಎದೆಗೆ,
  ಕಬ್ಬಿಗನ ಕಣ್ಣೆ!
ದೊಡ್ಡವರು ಅವರೆಲ್ಲ?
  ದೊಡ್ಡವರೆ ಹೌದು!
ನಾವು ದೊಡ್ಡವರಲ್ಲ?
  ಇರಬಹುದು! ಬಹುದು!
ಎದೆಯ ಬೇಯಿಸಿದವರು
ಹಿರಿಯರಾಗರೆ ಏನು!
ಕಣ್ಣ ತೋಯಿಸಿದವರು
ಹಿರಿಯರಾಗರೆ ಏನು?
ಬೆಂಕಿ ಕೊಳೆಯನು ಸುಡುವು
  ದೆಂದೆಂಬೆಯೇನು?
ನೀರು ಕೊಳೆಯನು ತೊಳೆದು
  ಬಿಡಲಾರದೇನು?

೬

ಬಾ ಕವಿತೆ, ಬಾ ಕೆಳದಿ,
  ಬಾ ನನ್ನ ತರಳೆ;
ಬಾ ಚೆಲುವೆ, ಚಂಚಲೆಯೆ,
  ಮಿಂಚುಗಣ್ಣೆರಳೆ!
ಬನದಳಿರ ಮರೆಯಲ್ಲಿ
ಬಗ್ಗಿಪುದು ಕೋಗಿಲೆಯು;
  ಕೇಳು, ಕೇಳಲ್ಲಿ!

ಮಾಲೆ ಮಾಲೆಗಳಾಗಿ
ಹಬ್ಬಿಹವು ಬೆಟ್ಟಗಳು ;
ನೋಡು ನೋಡಲ್ಲಿ !
ಪೂತ ನಂದಿಯು ಮರದಿ
ಬಂಡುಣಲು ಬಂದಿರುವ
ದುಂಬಿಗಳು ಮೊರೆಯುತಿವೆ
ಓಂಕಾರದಂತೆ !
ಹಿರಿಯ ತತ್ತ್ವದ ಚಿಂತೆ
ನಮಗೇತಕಂತೆ !
ಬಾ, ಇಲ್ಲಿ ಕುಳಿತುಕೋ
ಈ ಅರೆಯ ಮೇಲೆ,
ನಿನಗಿನಿತು ಹಾಡುವೆನು ;
ಅದೆ ನಮ್ಮ ಲೀಲೆ.
ಬಾ ಇಲ್ಲಿ, ಬಳಿಗೆ ಬಾ !
ದೂರ ನಿಲ್ಲುವೆಯೇಕೆ !
ಬಾ ಚೆಲುವೆ, ಬಳಿಗೆ ಬಾ ;
ತೊಡೆ ಸೋಂಕಿನಲಿ ಕುಳಿತು
ನನ್ನ ಹೆಗಲಿನ ಮೇಲೆ
ನಿನ್ನ ಕೈಗಳನಿಟ್ಟು,
ಬಾ ನಲ್ಲೆ, ಕುಳಿತುಕೋ
ಮೊಗದಲ್ಲಿ ಮೊಗವಿಟ್ಟು !
ಇಲ್ಲಿ ಒಲ್ಮೆಯೆ ಕಟ್ಟು,
ಮಾಡಿದುದೆ ಮಾಟ !
ಇಲ್ಲಿ ಕೇಳುವವರಿಲ್ಲ,
ಆಡಿದುದೆ ಆಟ !

೭

ಎಲ್ಲ ಕಾಮುಕರಿಲ್ಲಿ
  ನಾಚಿಕೆಯುದೇಕೆ ?
ಇಲ್ಲಿ ಕರುಬುವರಿಲ್ಲ
  ಹೆದರಿಕೆಯುದೇಕೆ ?
ಎಲ್ಲ ರಾಗಿಗಳಿಲ್ಲಿ,
ಎಲ್ಲ ಚಾಗಿಗಳಿಲ್ಲಿ !
ಆ ಮುಗಿಲು, ಆ ಬಾನು,
ಈ ಬೆಟ್ಟ, ಈ ಕಾನು,
ಈ ಹಕ್ಕಿ, ಆ ಮರವು,
ಅಲ್ಲಿ ಮೇಯುವ ಕರುವು,
ಎಲ್ಲ ಕಾಮುಕರಿಲ್ಲಿ ;
  ಗುಟ್ಟ ನಾ ಬಲ್ಲೆ !
ಬರಿದೆ ನಾಚಿಕೆಯೇಕೆ ?
  ಬಾ ಬಳಿಗೆ, ನಲ್ಲೆ !
ನಮ್ಮ ಕೆಳಗಿಹ ಬಂಡೆ,
ಜಡತನವ ನಟಿಸುತಿಹ
  ಈ ಕರಿಯ ಬಂಡೆ,
ಒಂದು ದಿನ ಬೇಟದಲಿ
ಬಳಿಯ ಬಂಡೆಯ ಕೂಡೆ
  ತೊಡಗಿದುದ ಕಂಡೆ !
ಕೇಳದೋ ! ಕೇಳಲ್ಲಿ :
ಬಾನು ಮುಗಿಲಿನ ಕೂಡೆ
  ಸರಸವಾಡುತಿದೆ !
ನೋಡದೋ ನೋಡಲ್ಲಿ ;
ಆ ಮರವು ಈ ಮರವ-
  ನೇಕೆ ಕಾಡುತಿದೆ ?

ಇವರ ನಟನೆಯ ನಾನು
  ಚೆನ್ನಾಗಿ ಬಲ್ಲೆ !
ಸಂಕೋಚವಿನ್ನೇಕೆ ?
  ಬಾ ಬಳಿಗೆ, ನಲ್ಲೆ !

೮

ಬಾ, ಬಳಿಗೆ ಬಾ, ಕವಿತೆ,
  ಕಬ್ಬಿಗನ ಕನ್ನೆ !
ಏನು ಹಾಡಲಿ ಹೇಳು
  ರಸ ಋಷಿಯು ಚೆನ್ನೆ ?
ಸಿಂಗರದ ಕಬ್ಬಗಳ
  ಹಾಡಲೇ ಹೇಳು ?
ದಿವ್ಯ ಕೀರ್ತನೆಗಳನು
  ಮಾಡಲೇ ಹೇಳು ?
ರಾಮಾಯಣವು ಬೇಕೆ ?
  ಭಾರತವು ಬೇಕೆ ?
ಕಾವ್ಯವೊ, ಪುರಾಣಗಳೊ ?
ಮೇಣು ವರ್ಣನೆಗಳೋ ?
ತತ್ತ್ವ ತುಂಬಿದ ದಿವ್ಯ
  ಕವನಗಳು ಬೇಕೆ ?
ಭಾವ ತುಂಬಿದ ರಮ್ಯ
  ಗಾನಗಳು ಬೇಕೆ ?
ಮೇಣು ನಿನ್ನನೆ ಕುರಿತು
  ಬಣ್ಣಿಸಲೆ ಹೇಳು ?
ನಿನ್ನ ಚೆಲುವನೆ ಕುರಿತು
  ಉಲಿಯಲೇ ಹೇಳು ?—
ಮೌನದಲಿ ಕೇಳಿಬಹ
  ಸಂಗೀತದಂತೆ,

ಕತ್ತಲಲಿ ಹೊಳೆವೇಕ
   ನಕ್ಷತ್ರದಂತೆ,
ತಿಳಿಗೊಳದೊಳರಳಿರುವ
   ಒಂದೆ ತಾವರೆಯಂತೆ,
ರಸಋಷಿಯ ಜೀವನದ
   ರಸಯೋಗದಂತೆ,
ನೀನಿರುವೆ, ಎಲೆ ಚೆಲುವೆ,
   ಮಳೆಬಿಲ್ಲಿನಂತೆ !—
ವೈಯಾರವಿಂತೇಕೆ ?
   ಮುಗುಳು ನಗೆಯೇಕೆ ?
ಸುಗ್ಗಿವಳ್ಳಿಯು ತೆರದಿ
   ಬಳುಕುತಿಹೆಯೇಕೆ ?
ಬಾ ಇನ್ನು ಬಳಿಗೆ ಬಾ.
   ಬಾ ನನ್ನ ಹೆಣ್ಣೆ ;
ಬಾ ಚೆನ್ನೆ, ಬಾ ರನ್ನೆ,
   ಬಾ ನನ್ನ ಕಣ್ಣೆ !
ಕಾಲ ಸುತ್ತುತಲಿಹುದು,
ಬಾಳು ಬತ್ತುತಲಿಹುದು,
   ಬಾ ಬೇಗಮಾಡು !
ಸ್ವರ್ಗ ಸುಖಕಿಹಸುಖವೆ
ಕೇಲಿಕ್ರೈ, ಎಲೆ ಕವಿತೆ,
   ಬಾ, ಬೇಗ ಕೂಡು !

೯

ಸ್ವರ್ಗ ಸುಖದಲ್ಲಿ ನಗೆ
   ಸಂದೇಹವಿಲ್ಲ ;
ಮರ್ತ್ಯ ಸುಖದಲ್ಲಿ ನಗೆ
   ದ್ವೇಷವೂ ಇಲ್ಲ !

ಸಾವದನು ಸಾಯಿಸದೆ,
ಮೋಣಿದನು ಬೇಯಿಸದೆ,
ನಮ್ಮನೂ ನೋಯಿಸದೆ
ನಲಿಯುವಂ ಬಾ!
ನೋವೆ ಸಾಧನೆಯಲ್ಲ;
ಒಲಿಯುವಂ ಬಾ!
ನಾಳೆ ನಾಳೆಗೆ ಇರಲಿ,
ನಿನ್ನೆ ನಿನ್ನೆಗೆ ಇರಲಿ,
ಇಂದಿಗಿರಲಿಂದೆ!
ನಾಳೆಯನೆ ನೋಳ್ಪರಿಗೆ,
ಇಂದನೇ ಕಾಂಬರಿಗೆ,
ಮುಂದೆ ಸೊಗವೊಂದೆ!
ಬಹು ಜನರು ಮಾಡಿದುದೆ
ಪಾಪವಾದರು ಪುಣ್ಯ;
ಬಹು ಜನರು ಸೇರಿದುದೆ
ನರಕವಾದರು ಸ್ವರ್ಗ!
ಎಲ್ಲ ಹೋದಡೆಯಲ್ಲಿ
ನಾವಿಬ್ಬರಿದ್ದಲ್ಲಿ,
ನಮ್ಮ ವೈಕುಂಠ!
ಸತ್ತವರಿಗಿಹುದಲ್ಲಿ
ಅವರ ವೈಕುಂಠ!
ಬದುಕಿರುವ ನಮಗಿಲ್ಲಿ
ನಮ್ಮ ವೈಕುಂಠ!
ಸತ್ತವರು ನಾವಲ್ಲ,
ಭಯವೇಕೆ ಬಾ!
ಬಾಳಿನಲಿ ಹೊತ್ತಿಲ್ಲ
ಬಾ ಬೇಗ ಬಾ!

೧೦

ಅದೊ ಕೇಳು ಕೇಳಲ್ಲಿ;
ಕಾಮುಳ್ಳಿ ಕೂಗುತಿದೆ
ಸಂಪಗೆಯ ಮರದಲ್ಲಿ!
ಯಾರನದು ಕರೆಯುತಿದೆ?
ನೀ ಬಲ್ಲೆಯೇನು?
ಹರಿಯ ಕರೆಯುವುದಲ್ಲ,
ವರನ ಕರೆಯುತ್ತಿಹುದು!
ನಾ ಬಲ್ಲೆ ನಾನು!
ಪ್ರೇಮದಿಂದಲೆ ಬಂದು,
ಪ್ರೇಮದಲ್ಲಿಯೆ ನಿಂದು,
ಪ್ರೇಮದಲ್ಲಿಯೆ ಸಂದು
ಹೋಗುವೆವುಗೆಲ್ಲ
ಪ್ರೇಮವೇ ಹರಿಯೆಂದು
ರಸಋಷಿಯು ಬಲ್ಲ!
ಕಾಮುಳ್ಳಿಯುದನರಿತೆ
ರಮಣನನು ಕೂಗುತಿದೆ!
ಅದರೊಲ್ಮೆಯಿಸಿದಸಿಯೆ
ಪ್ರಾರ್ಥನೆಯು ಅವಕೆ!
ಒಲ್ಮೆಯಿಂ ಕರೆಯುದಿಹ
ಬದುಕೊಂದು ಬದುಕೆ?

೧೧

ಬುವಿಯು ಸೆರೆಮನೆಯೆಂದು,
ಸೆರೆಯುನೊಡೆಯುವೆವೆಂದು,
ವೇದ ಗೀದಗಳೆಂಬ,
ಶಾಸ್ತ್ರಗೀಸ್ತ್ರಗಳೆಂಬ
ಗೋಡೆಗಳ ಕಟ್ಟಿ

ಸೆರೆಮನೆಯೊಳಿನ್ನೊಂದು
ಸೆರೆಮನೆಯ ಮಾಡಿದರೆ
ಮೊದಲ ಸೆರೆಮನೆಯೊಡೆದು
ಮುಕ್ತಿಯಹುದೇನು ?
ಬಾಳು ಬಂಧನವೆಂದು,
ಬಂಧನವಳಿಯಲೆಂದು,
ನೀತಿ ಧರ್ಮಗಳೆಂಬ
ತಪಸು ಗಿಪಸುಗಳೆಂಬ
ನೇಣುಗಳ ಹೊಸೆದು,
ಬಂಧನಂಗಳ ಮೇಲೆ
ಬಂಧನಂಗಳ ಸುತ್ತಿ
ಮೊದಲ ಬಂಧನ ಹರಿದು
ಹೋಯಿತೆಂದೊದರಿದರೆ
ಮರುಳಲ್ಲವೇನು ?
ಯಾರೊ ಮಾಡಿದ ಮನೆಯು
ನಮಗೆ ಸೆರೆಯಹುದೆಂದು
ನಾವು ಮಾಡಿದ ಸೆರೆಯೆ
ಮನೆಯಪ್ಪುದೇನು ?
ಯಾರೊ ಕಟ್ಟಿದ ನೇಣು
ಸಂಕೋಲೆಯಾಗುವೊಡೆ
ನಾವು ಸುತ್ತಿದ ಮಿಣಿಯು
ಜನಿವಾರವೇನು ?
ಅಯ್ಯೊ, ಎಂದೂ ಬೇಡ,
ಆವನ ಹಿರಿಸೆರೆಯಲ್ಲಿ
ನಮ್ಮ ಕಿರಿಸೆರೆಯು !
ಅಯ್ಯೊ, ಎಂದೂ ಬೇಡ

ಅವನ ಕಟ್ಟಿನ ಮೇಲೆ
  ನಮ್ಮ ಕಿರುಗಟ್ಟು !
ನಾನು ಪ್ರಾರ್ಥಿಸಲೊಲ್ಲೆ;
ನಾನು ಪ್ರೀತಿಸಬಲ್ಲೆ !
ಪ್ರೀತಿ ಎಂಬುದೆ ನಮಗೆ
  ಪ್ರಾರ್ಥನೆಯ ಸಾರ!
ಎದೆಯ ಮೇಲೆದೆಯಿಟ್ಟು
  ಬಾ ಬಳಿಗೆ ಬಾರ!
ನಮ್ಮ ಬಾಳಿನ ಸೊದೆಯ
  ನಾ ಹೀರಬಲ್ಲೆ !
ಅದರ ಆಳಲಿನ ಸೊಗವ
  ನಾ ಪಡೆಯಬಲ್ಲೆ !
ಸೆರೆಗೆ ಸೆರೆ ಮದ್ದಲ್ಲ
  ಓ ಮುದ್ದು ನಲ್ಲೆ !

೧೨

ಇನ್ನು ಹೇಳುವೆ ಕೇಳು :
(ನಾಸ್ತಿಕನು ನಾನಲ್ಲ!)
ಮುಂದನರಿತವರಾರು ?
ಇಂದನರಿಯದರಾರು ?
ಮುಂದೆ ಬಂದರೆ ಬರಲಿ !
ಸಗ್ಗ ಸೊಗವನು ತರಲಿ !
ಇಂದಿದ್ದರೇನಂತೆ ?
  ಇಂದುಮೆಮಗಿರಲಿ !
ನಾಳೆ ಇರಲೇನಂತೆ?
  ನಮಗದೂ ಇರಲಿ!
ಬೇಡ ಎನ್ನುವರಲ್ಲ,
ಇಲ್ಲ ಎನ್ನುವರಲ್ಲ,
  ನಮಗೆಲ್ಲ ಇರಲಿ !

ಯಾರಾದರೇನಂತೆ
ನಿನ್ನೆಯೋ? ನಾಳೆಯೋ?
ತರುವವರು ತರಲಿ!
ಬೇಡವೆಂದವರಾರು?
ನಮಗೆಲ್ಲ ಇರಲಿ!
ಬರುವ ಸೊಗವೆಲ್ಲವೂ
ಸಂತೋಷ, ಬರಲಿ!
ಬದುಕಿರಲು ಸಾವಿಲ್ಲ,
ಸಾವಿರಲು ಬದುಕಿಲ್ಲ,
ನಾವಿರಲು ಸಾವಿಲ್ಲ,
ಸಾವಿರಲು ಸಾವಿಲ್ಲ!
ಇನ್ನಳುಕಲೇನು?
ಗುರುಪೂರ್ಣಿಮೆಯಾದರಿಗೆ
ಭಯವೆಂದರೇನು?
ಗುರು ಮಂತ್ರ ದೀಕ್ಷಿತರು
ಯಾವುದೆಮಗೇನು?
ನಮಗಿರಲು ನಿರ್ಭರತೆ
ಹಿಂಜರಿವುದೇನು?

೧೩

ಸಾರ್ವಭೌಮಿಕ ತತ್ತ್ವ,
ತತ್ತ್ವಸಾರದ ಸತ್ತ್ವ,
ರಸ ಋಷಿಯ ದರ್ಶನಂ,
ಉತ್ತಮ ರಹಸ್ಯಮಿದು
ನಿನಗೊರೆವೆ ಕೇಳು:
ಅದು ನನ್ನಿ, ಇದು ನನ್ನಿ,
ಇಹುದೊಂದೆ ನನ್ನಿ.

ಚಲಿಸಲದು! ನಿಲ್ಲಲಿದು!
ನನ್ನಿಗಳ ನನ್ನಿ!
ಅದನುಳಿದರಿದು ಸೊನ್ನೆ;
ಇದನುಳಿದರದು ಸೊನ್ನೆ;
ಒಂದನುಳಿದೊಂದಿರದು,
ಓ ಎನ್ನ ಚೆನ್ನೆ!
ಕಂಡರದು ಕಾಣದಿದು,
ಕಂಡರಿದು ಕಾಣದದು,
ಎಂಬುದನು ಕಂಡಿಹುದು
ರಸಋಷಿಯ ಕಣ್ಣು!
ಕಣ್ಮುಚ್ಚಲಿದುವೆ ಅದು,
ಕಣ್ದೆರೆಯಲದುವೆ ಇದು!
ಗುರು ಕೊಟ್ಟ ಬಳ್ಕೆಯಿದು,
ಓ ಕವಿಯ ರನ್ನೆ!
ಒಂದೆ ಎರಡಂತಿಹುದು,
ಎರಡೆ ಒಂದಾಗಿಹುದು;
ಹುಟ್ಟಿದರು ಹುಟ್ಟಿಲ್ಲ,
ಅದನೊರೆಯೆ ಮಾತಿಲ್ಲ;
ನನ್ನಿ ಹೊಳೆವುದೆ ಹೊರತು
ಬೆಳೆಯಲಾರದು ತರಳೆ!
ನನ್ನ ಕಣ್ಣಿನ ಮಿಂಚು
ಅದರಿದರ ಒಳಸಂಚು!
ಕಂಡು ತಿಳಿ, ಕವಿತೆ!

೧೪

ಜನ್ಮ ಮುಂದಿರುವುದೇಂ?
ಇದ್ದರೇನಿರಲಿ!
ಹೋದವರು ಬರುವರೇಂ?
ಬಂದರೇಂ ಬರಲಿ!

ಇರುವವರು ಪೋಪರೇಂ?
ಪೋದರೇಸಿರಲಿ!
ಬಾ ಕವಿತೆ, ಬಾ ಕೆಳದಿ
ಬಾ ನನ್ನ ತರಳೆ.
ಬಾ ಚೆಲುವೆ, ಚಂಚಲೆಯೆ
ಮಿಂಚುಗಣ್ಣೊರಳೆ!
ಎಲ್ಲ ನಶ್ವರವೆಂದು
ಇರುವುದನುಳಿವುದೇಕೆ?
ಕೆಲಹಣ್ಣು ಕಹಿಯೆಂದು
ಎಲ್ಲ ಹಳಿಯುವುದೇಕೆ?
ಕಹಿಯೆದೆಯೊಳಿಹ ಸಿಹಿಯು
ಸಿಕ್ಕಷ್ಟು ಸಿಗಲಿ!
ದುಃಖದೊಳಗಿಹ ಸುಖವು
ಬಂದಷ್ಟು ಬರಲಿ!
ಕಡಲು ರತ್ನದ ರಾಶಿ
ಎಂದರೆಮಗೇನು?
ಕೈಲೊಂದು ರನ್ನವಿರೆ
ಅದನೆಸೆವುದೇನು?
ಬಾ ಕವಿತೆ, ಬಾ ಚೆಲುವೆ,
ಬಾ ತರಳೆ; ಎನ್ನೊಲವೆ,
ಗುರುದೇವನನು ಭಜಿಸಿ,
ಬೇಡವಾದುದ ತ್ಯಜಿಸಿ,
ಕೈಗೆ ಬಂದುದ ಭುಜಿಸಿ,
ಬದುಕುವಂ ಬಾ!
ಭಕ್ತಿಯಲಿ, ಶಾಂತಿಯಲಿ,
ಒಂದಿಸಿತು ಗೊಣಗುಡದೆ,

ನಶ್ವರದ ನಡುವೆಯಿಹ
ಶಾಶ್ವತವ ಸವಿಯುತ್ತ,
ದುಃಖಗಳ ಎದೆಯೊಳಿಹ
ಸುಖಗಳನು ಸುಲಿಯುತ್ತ,
ಇಹಪರಗಳೆರಡನೂ
ಪ್ರೇಮದಿಂ ಮುತ್ತುತ್ತ
  ನಲಿಯುವಂ ಬಾ!
ಅವರು ಹಾಗೆಂದರೇಂ?
ಇವರು ಹೀಗೆಂದರೇಂ?
  ನಮಗೇನು ಬಾ!
ನನ್ನ ಮುದ್ದಿನ ಹೆಣ್ಣೆ,
ಕಬ್ಬಿಗನ ಹಣೆಗಣ್ಣೆ,
ಬಾ ಚೆಲ್ವೆ, ಬಾ ತರಳೆ,
  ಬಾ ನನ್ನ ಚಿನ್ನೆ;
ಬಾ ಕೆಳದಿ, ಸುಂದರಿಯೆ,
  ಬಾ ನನ್ನ ಹೆಣ್ಣೆ:
ದಟ್ಟ ಬನಗಳ ಮಲೆಯ
  ನಡುನೆತ್ತಿಯಲ್ಲಿ,
ತಣ್ಣೆಳಲ ತಣ್ಣೆಲರ
  ಮಲೆನಾಡಿನಲ್ಲಿ
ಮೈಮರೆತು ನಲಿಯುವಂ,
ಎದೆಮುಟ್ಟಿಯೊಲಿಯುವಂ,
  ಏಕಾಂತದಲ್ಲಿ!
ಇಲ್ಲಿ ಪ್ರೇಮವೆ ನೀತಿ,
ಇಲ್ಲಿ ಧರ್ಮವೆ ಪ್ರೀತಿ,
ಇಲ್ಲಿಯೊಲ್ಮೆಯೆ ಕಟ್ಟು,

ಇಲ್ಲಿ ಬೆಟ್ಟವೆ ಗುಟ್ಟು,
ಮಾಡಿದುದೆ ಮಾಟ!
ಇಲ್ಲಿ ಕೇಳುವವರಿಲ್ಲ,
ಆಡಿದುದೆ ಆಟ!

# ಮೊದಲ ಚರಣಗಳು

# ಕುವೆಂಪು ಅವರ ಕೃತಿಗಳು

**ಕವನ ಸಂಗ್ರಹಗಳು :**

ಕೊಳಲು
ನವಿಲು
ಕಲಾಸುಂದರಿ
ಪ್ರೇಮ ಕಾಶ್ಮೀರ
ಕಥನ ಕವನಗಳು
ಚಿತ್ರಾಂಗದಾ
ಅಗ್ನಿಹಂಸ
ಪಕ್ಷಿಕಾಶಿ
ಪಾಂಚಜನ್ಯ
ಕೋಗಿಲೆ, ಸೋವಿಯೆಟ್ ರಷ್ಯಾ
ಕೃತ್ತಿಕೆ
ಕಿಂದರಿಜೋಗಿ
ಹಾಳೂರು
ನನ್ನ ಮನೆ
ಮರಿವಿಜ್ಞಾನಿ
ಮೇಘಪುರ

**ಕಥೆಗಳು, ಕಾದಂಬರಿ**

ಸಂನ್ಯಾಸಿ, ಇತರ ಕಥೆಗಳು
ನನ್ನ ದೇವರು, ಇತರ ಕಥೆಗಳು
ಮಲೆನಾಡಿನ ಚಿತ್ರಗಳು
ಕಾನೂರು ಸುಬ್ಬಮ್ಮ ಹೆಗ್ಗಡತಿ

**ನಾಟಕಗಳು**

ಯಮನ ಸೋಲು, ಇತರ ನಾಟಕಗಳು
ಬಿರುಗಾಳಿ
ರಕ್ತಾಕ್ಷಿ
ಮೂರು ನಾಟಕಗಳು
ಶೂದ್ರತಪಸ್ವಿ; ಬಲಿದಾನ
ಬೆರಳ್‌ಗೆ ಕೊರಳ್

**ಭಾಷಣ, ವಿಮರ್ಶೆ**

ಸಾಹಿತ್ಯ ಪ್ರಚಾರ
ನಿರಂಕುಶಮತಿಗಳಾಗಿ
ಕಾವ್ಯ ವಿಹಾರ



# ಮದುವೆಯ ಶುಭ ಸಮಯದಲ್ಲಿ ಉಡುಗೊರೆಯಾಗಿ ಕೊಡಲು ತಕ್ಕ ಮಧುರ ಪುಸ್ತಕಗಳು

---

| | | | | |
|---|---|---|---|---|
| ಪ್ರೇಮಕಾಶ್ಮೀರ—ಕುವೆಂಪು | .... | ೨ | ೦೮ | ೦ |
| ಷೋಡಶಿ—ಕುವೆಂಪು | .... | ೨ | ೧೨ | ೦ |
| ಬಿಡಿಮುತ್ತು—ತೀ. ನಂ. ಶ್ರೀ | .... | ಅಚ್ಚಿನಲ್ಲಿ | | |
| ಹಗಲುಗನಸುಗಳು-ಎ.ಎನ್. ಮೂರ್ತಿರಾವ್ | | ೧ | ೪ | ೦ |
| ನನ್ನ ಅಪ್ಸರೆ—ಸಿ. ಕೃಷ್ಣ | .... | ೦ | ೬ | ೦ |
| ಮುಗುದೆಯರ ಪತ್ರಗಳು—ಸಿ. ಕೃಷ್ಣ | .... | ೧ | ೮ | ೦ |
| ಗೌರಿಯ ಮದುವೆ— ,, | .... | ೧ | ೪ | ೦ |
| ಇದ್ದರೂ ಇರಬಹುದು—ಎಸ್.ಜಿ. ಶಾಸ್ತ್ರಿ | | ೨ | ೪ | ೦ |
| ಕನ್ನಡ ಋತುಸಂಹಾರ— ಎಸ್.ವಿ. ಪರಮೇಶ್ವರ ಭಟ್ಟ | | ಅಚ್ಚಿನಲ್ಲಿ | | |

ಅಚ್ಚಿನಲ್ಲಿ

ಬಿ. ಎಂ. ಶ್ರೀಕಂಠಯ್ಯನವರ

## ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ

ಭಾಷಣಗಳು ಮತ್ತು ಲೇಖನಗಳು